## GREEN

*Kuvempu (K. V. Puttappa)*

An ocean of Green
The earth has been
During the season of *Navarathri* ![1]
Soaked in green and drunk with green,
Green has turned the poet's soul!

Green the sky; green the clouds;
Green the paddy fields around;
Green the hill; green the dale;
And lo, green the evening glow!

The tender hue of the paddy fields
Of the charming *Asweeja*[2]
Glimmers green as the parrot's chest!
Close lies, like the forest's hem
The Areca garden, green with fruits!

Behold the green green grass—
A velvet veil of emeralds new—
Carpets the earth
That nothing but green doth flood the eye!

Green smells the blossoming flower,
And green the coolness of the breeze!
Green too the sweet note of the bird
And green the very breath of the earth!

Green here and green there,
An ocean of green every where;
Green flows the blood in the poet's vein
And a blazing green has turned his soul!

*Tr. the author*

---

1. The season immediately after the monsoons; roughly corresponds to September and October.
2. October.

# ದೇವರು ರುಜು ಮಾಡಿದನು!

ಕುವೆಂಪು (ಕೆ. ವಿ. ಪುಟ್ಟಪ್ಪ)

ದೇವರು ರುಜು ಮಾಡಿದನು;
ರಸವಶನಾಗುತ ಕವಿ ಅದ ನೋಡಿದನು!

ಬಿತ್ತರದಾಗಸ ಹಿನ್ನೆಲೆಯಾಗಿರೆ
ಪರ್ವತದೆತ್ತರ ಸಾಲಾಗೆಸೆದಿರೆ
ಕಿಕ್ಕಿರಿದಡವಿಗಳಂಚಿನ ನಡುವೆ
ಮೆರೆದಿರೆ ಜಲಸುಂದರಿ ತುಂಗೆ
ದೇವರು ರುಜು ಮಾಡಿದನು,
ರಸವಶನಾಗುತ ಕವಿ ಅದ ನೋಡಿದನು!

ನದಿ ಹರಿದಿತ್ತು; ಬನ ನಿಂತಿತ್ತು;
ಬಾನ್ ನೀಲಿಯ ನಗೆಬೀರಿತ್ತು.
ನಿರ್ಜನ ದೇಶದ ನೀರವ ಕಾಲಕೆ
ಖಗರವ ಪುಲಕಂ ತೋರಿತ್ತು.
ಹೂಬಿಸಿಲಲಿ ಮಿರುಗಿರೆ ನಿರಿವೊನಲು
ಮೊರೆದಿರೆ ಬಂಡೆಗಳಲಿ ನೀರ್ಪೊದಲು
ರಂಜಿಸೆ ಇಕ್ಕೆಲದಲಿ ಹೊಮ್ಮಳಲು
ಸಿಬ್ಬಲುಗುಡ್ಡೆಯ ಹೊಳೆಯಲಿ ಮಿಯುತ
ಕವಿಮನ ನಾಕದಿ ನೆಲಸಿತ್ತು;
ಮಧು ಸೌಂದರ್ಯದ ಮಧುರ ಜಗತ್ತು
ಹೃದಯ ಜಿಹ್ವೆಗೆ ಜೇನಾಗಿತ್ತು!

ಪೃಶ್ಯದಿಗಂತದಿನೊಮ್ಮೆಯೆ ಹೊಮ್ಮಿ
ಗಿರಿವನ ಪಟದಾಕಾಶದಲಿ
ತೇಲುತ ಬರಲ್ಕೆ ಬಲಾಕಪಂಕ್ತಿ
ಲೇಖನ ರೇಖಾನ್ಯಾಸದಲಿ,
ಅವಾಙ್ಮಯ ಛಂದಃಪ್ರಾಸದಲಿ,

## GOD SCRIBBLES HIS SIGNATURE

*Kuvempu (K. V. Puttappa)*

God scribbles his signature;
The entranced poet saw it!

The expanse of the sky as backdrop,
A range of mountains stood,
Between the fringes of two dense forests
Shone water-beauty, the river Tunga,
God scribbles His signature,
And the poet entranced saw it!

The river flowed; the forest stood;
The sky scattered a blue smile.
The voice of birds made a soundless time
In the uninhabited region vibrate with a thrill.
The straight flow of water shone in fresh sunlight,
The water's voice fumbled amidst the rocks,
On both sides was golden sand,
And then as he bathed in the river at Sibbalagudde,
The poet's heart was in heaven;
The sweet universe of honey-loveliness
Was honey to the heart's palate!

At once spreading from sky's rim,
In a sky with the background of hills and forests,
Floated a group of white birds,
As if drawn in ink,
In a non-verbal prosody,
As if confirming world's agreement of wonder
At the loveliness and skill of creation
That He is the eternal life,
God scribbled His signature
With the white birds for his pretext
The entranced poet saw it!

*Tr. the author*

ಸೃಷ್ಟಿಯು ರಚನೆಯು ಕುಶಲಕೆ ಚೆಂದಕೆ
ಜಗದಚ್ಚರಿಯಂದದ ಒಪ್ಪಂದಕೆ
ಚಿರಚೇತನ ತಾನಿಹೆನೆಂಬಂದದಿ
ಬೆಳ್ಳಕ್ಕಿಯ ಹಂತಿಯು ಆ ನೆವದಿ
ದೇವರು ರುಜು ಮಾಡಿದನು:
ರಸವಶನಾಗುತ ಕವಿ ಅದ ನೋಡಿದನು !

## ಸಾಮಾನ್ಯ ಬೀದಿ

ಕುವೆಂಪು (ಕೆ. ವಿ. ಪುಟ್ಟಪ್ಪ)

ಹಿನ್ನೆಲೆಯನು ರಚಿಸಿರೆ ಸಂಜೆ,
(ಹೆತ್ತಳೊ ಎನೆ ಬಂಜೆ!)
ನೋಡಾಗಿದೆ ಸಗ್ಗಕೆ ಹಾದಿ
ಸಾಧಾರಣ ಬೀದಿ!

ಬೇರೆಯ ಸಮಯದಿ ಈ ಬೀದಿ
ಬೆಳಕಿಲ್ಲದ ಬೂದಿ;
ಇಕ್ಕೆಲದಲಿ ತಂತಿಯ ಕಂಬ;
ಮಸಿಮುಸುಡಿಯ ಜಂಬ!
ಮನೆಗಳು ಕೆಲವಿವೆ, ಸಾಮಾನ್ಯ;
ಸೌಂದರ್ಯಕೆ ಅನ್ಯ!

ಪಡುವಣ ದೆಸೆಗೇರಿದೆ ರಸ್ತೆ;
ಅದೊ ಬರಿ ದುರವಸ್ಥೆ!
ಆದರೆ ಸಂಧ್ಯಾಕಾಲದಲಿ,
(ಬೆಕ್ಕಾದಂತೆ ಹುಲಿ)!
ಅತಿ ಸಾಮಾನ್ಯದ ಈ ಬೀದಿ,
ಕಾಣ್, ಸ್ವರ್ಗಕೆ ಹಾದಿ!

## A STREET—QUITE ORDINARY

*Kuvempu (K. V. Puttappa)*

When evening paints the sky,
(A desert delivers an oasis!)
Lo, this ordinary street
Carves a path to paradise!
At other times this street
Is mere ash—burnt out fire!

On either side run rows of telegraph poles,
An empty pride of an ugly face!
A few houses, most ordinary,
With not a trace of beauty!

The street climbs to the west,
Clumsy and disordered!
But when evening arrives
(A cat turns into a tiger!)
This very ordinary street,
Lo, leads to paradise!

*Tr. the author*

## ಅನಿಕೇತನ

ಕುವೆಂಪು (ಕೆ. ವಿ. ಪುಟ್ಟಪ್ಪ)

ಓ ನನ್ನ ಚೇತನ,
ಆಗು ನೀ ಅನಿಕೇತನ!
    ರೂಪ ರೂಪಗಳನು ದಾಟಿ,
    ನಾಮಕೋಟಿಗಳನು ಮೀಟಿ,
    ಎದೆಯ ಬಿರಿಯೆ ಭಾವದೀಟಿ,
        ಓ ನನ್ನ ಚೇತನ,
        ಆಗು ನೀ ಅನಿಕೇತನ!

ನೂರು ಮತದ ಹೊಟ್ಟ ತೂರಿ
ಎಲ್ಲ ತತ್ತ್ವದೆಲ್ಲೆ ಮೀರಿ
ನಿರ್ದಿಗಂತವಾಗಿ ಏರಿ,
    ಓ ನನ್ನ ಚೇತನ,
    ಆಗು ನೀ ಅನಿಕೇತನ!

ಎಲ್ಲಿಯೂ ನಿಲ್ಲದಿರು;
ಮನೆಯನೆಂದೂ ಕಟ್ಟದಿರು;
ಕೊನೆಯನೆಂದೂ ಮುಟ್ಟದಿರು;
    ಓ ಅನಂತವಾಗಿರು!
    ಓ ನನ್ನ ಚೇತನ,
    ಆಗು ನೀ ಅನಿಕೇತನ!

ಅನಂತ ತಾನ್ ಅನಂತವಾಗಿ
ಆಗುತಿಹನೆ ನಿತ್ಯಯೋಗಿ;
ಅನಂತ ನೀ ಅನಂತವಾಗು:
ಆಗು, ಆಗು, ಆಗು, ಆಗು,
    ಓ ನನ್ನ ಚೇತನ,
    ಆಗು ನೀ ಅನಿಕೇತನ!

## THE UNHOUSED CONSCIOUSNESS

*Kuvempu (K. V. Puttappa)*

Be unhoused, O my soul!
Only the Infinite is your goal.

Leave these myriad forms behind.
Leave the million names that bind.
A flash piercing your heart and mind,
Be unhoused, O my soul!
Only the Infinite is your goal.

Winnow the chaff of a hundred creeds.
Beyond these systems, hollow as reeds,
Turn unhorizen'd to the Truth that leads:
Be unhoused, O my soul!

Stop not on the unending way.
Never build a house of clay.
Endless the quest both night and day:
No end, no end to your play!
Be unhoused, O my soul!

The Infinite cancels its end,—
Diurnal seer, to descend.
Endless the quest you apprehend
And so, Infinite, you ascend.
Be unhoused, O my soul!
Only the Infinite is your goal.

*Tr. V. K. Gokak*

# ಕವಿ

ಪು.ತಿ.ನ. (ಪು. ತಿ. ನರಸಿಂಹಾಚಾರ್)

ಯೋಜನಗಳಾಚೆಯೊಳು ಎಲ್ಲಿಯೋ ಜನಿಯಾಂತು
ಮಿಂಚಿನಣುಗಳನೇರಿ ಸಕಲ ದಿಙ್ಮಂಡಲವ
ಸಂಚರಿಸುತಂತರದಿ ಮೌನದಿಂ ಮಿಡಿಯುತಿಹ
ಸೋಜಿಗದ ಗೀತವನು ಹಿಡಿದು, ಉಜ್ಜ್ವಲಗೊಳಿಸಿ,

ಶ್ರೋತೃಪಥವೈದಿಸುವಯಂತ್ರದೊಲು,—ಹೇ ಕವಿಯೆ,
ಬಾಳುಬಾಳುಗಳಾಚೆ ಬ್ರಹ್ಮಾಂಡ ಹೃದಯಾಂತ-
ರಾಳದೊಳು ಸಂತತಂ ಸಂಜನಿಸುವಾನಂದ—
ಮಾತೃಕೆಯೆ ತಾನಾದ, ವಿಶ್ವಕೆಲ್ಲಕು ಹರಡಿ,

ವಿಕೃತಿ ಪದರಗಳಲ್ಲಿ ಮೌನವಾಗಿಹ, ಶಿವದ
ಗೀತವನು ಕರಣಗೋಚರಮಾಗೆ ಸ್ಪಂದಿಸುವ
ಚೇತನರೊಳಾ ಚಿದಾನಂದವನೆ ಮರುಕೊಳಿಪ,
ಪ್ರಕೃತಿ ಶಿಲ್ಪಿಯು ಸಮೆದ ಚಿದ್ಯಂತ್ರ ನೀನಲಾ!

ಮನದ ಮೊಸೆಯನು ಮಾಡು ಶಿವಸೂಚಿಯಾಗುವಂತೆ;
ಮರ್ಮವನು ನುಡಿ, ಲೋಕ ತನ್ನ ತಾನರಿಯುವಂತೆ.

## THE POET

*Pu. Ti. Na. (P. T. Narasimhachar)*

The radio catches the silently vibrating songs of wonder,
Born somewhere beyond distances,
Traversing through all space, on the crest of eternal waves;
Then it enhances their brilliance,
Carrying them to its listeners!
Likewise, Oh, poet, you stir the songs of joy,
That are born eternally beyond births,
In the heart of all creation, occupying the cosmos formlessly
Till you mothered them; and thus you revive
In all living creatures supreme bliss;
You are mind's contraption, fashioned by nature!
Sharpen the point of mind toward that supreme bliss,
And reveal the very essence of truth
That the world may know itself better!

*Tr. K. Raghavendra Rao*

## ಕೊಳದ ಹೇಳಿಕೆ

ಪು.ತಿ.ನ. (ಪು. ತಿ. ನರಸಿಂಹಾಚಾರ್)

"ಹೊನಲಿನ ಗೆಲುವಿಲ್ಲಿದಕೆ
ಕಮರಿಯು ಹಾರುವ ಸಾಹಸವಿಲ್ಲಿದಕೆ
ಕನಿಕರದಿಂದಲಿ ಗಾಳಿ
ತಳ್ಳಲು ಚರಿಸುವುದಲೆ ಹೆಳವನ ಹೋಲಿ
ಹರಿಯದು ತನ್ನಿಂದಾಚೆ
ಇದಕೆದೆಯೊಳು ದಿವಕೆಡೆಗೊಡದಿಹ ಪಾಚೆ
ಚೆಲುವಿದರೀ ಸೋಪಾನ
ಇದಕಾದೊಡೆ ಚಲಿಸುವ ಹಾಡುವ ಶುಚಿಗೊಳ್ಳುವ ಋತ ಊನ."

ಇಂತೆನ್ನನು ಜರೆಯದಿರು
ಹರಿಸುವ ಋತ ಸಲ್ಲದದು ಕಟ್ಟೆಯು ಇದಿರು
ಆದೊಡೆ ಚ್ಯುತಿಯಿಲ್ಲದಕೆ
ಈ ಮುಲುಗುಟ್ಟುವ ಹುಳವಾಯ್ತಾ ಋತಕೆ
ಮೀಣೀ ಹಾವೀ ಕಪ್ಪೆ
ಇಕೊ, ಈ ತಾವರೆ ಹೂ ! ಇದು ನಿನಗೊಪ್ಪೆ?
ಎನೆ ಕೊಳ, ನಾ ಬೆರಗಿಂದ
ಉಡುಗಿದ ನಡೆ ಉಲಿಯುದ ಹಾಡೀ ಹೂವಾಯ್ತೆನೆ ಕೊಂಡೆನು ಬೆರಗಿಂದ

## THE LAKE

*Pu. Ti. Na. (P. T. Narasimhachar)*

The lake says·
"Do not complain against me thus—
This lake lacks the triumphant look of flow,
Lacks, too, the adventure and courage to leap valleys
And limps like a lame man
When the compassionate breeze pushes it gently;
It cannot flow beyond itself;
The moss on its breast reflects no sky;
Its stops are lovely
But its nature is to shun motion, song and self cleansing flow!'

The nature of the bound is not to flow,
But it has no ending since it has no beginning—
Even so it has its small internal motions,
Rippled by snakes and frogs—
And look, here is a lotus? Don't you like it?"

When the lake had its say, amazed, I thought,
"Perhaps all its suppressed urge to sing and flow blossoms into this flower",
And then took the gift.

*Tr. K. Raghavendra Rao*

# ದಿವ್ಯ ಜ್ಯೋತಿ

ಡಿ. ಎಸ್. ಕರ್ಕಿ

ತಿಳಿ ನೀಲದಲ್ಲಿ ತಾ ಲೀನವಾಗಿ ಅವ ಹೋದ ದೂರ ದೂರ
ಬೆಳಗಿಹುದು ಇಲ್ಲಿ ಅವ ಬಿಟ್ಟ ಬೆಳಕು; ಇನ್ನೊಮ್ಮೆ ಏಕೆ ಬಾರ?

ಅಂದು ಸಂಜೆ ಪ್ರಾರ್ಥನೆಗೆ ದೇವಮಂದಿರದ ದಾರಿಯಲ್ಲಿ
ಆಚೆ ಈಚೆ ಮೊಮ್ಮಕ್ಕಳಿಬ್ಬರಲಿ ಮೈಯಭಾರ ಚೆಲ್ಲಿ
ಜಗದ ಕರುಣೆ ನಡೆವಂತೆ ನಡೆದು ಮಂದಿರದ ಪೀಠವೇರಿ
ನಿಂದನಿಲ್ಲೊ !—ಜಡವುಳಿದು ಜೀವವೊಂದಾಯ್ತು ದೇವನಲ್ಲಿ.

ಎಸೆದ ಗುಂಡಿಗಾ ಕುಸಿದ ದೇಹದಲಿ ವಿಮಲ ರಕ್ತ ಚೆಲ್ಲಿ
ಮೀಯಿಸಿತ್ತು ಈ ಜಗದ ಮನವನೇ ಶೋಕ ಜಲಧಿಯಲ್ಲಿ
ಮುಗಿದ ಕೈಯು ಮುಗಿದಂತೆ ಇತ್ತು; ನೆಲಸಿತ್ತು ಕ್ಷಮೆಯು ಮೊಗದಿ
ಎದೆಯೊಳೆಂಥ ತಿಳಿಭಾವವಿತ್ತು ! ಅದನಾವ ಬಲ್ಲ ಜಗದಿ?

ಹೋದ ಹೋದನವ ತ್ಯಾಗಜೀವನದ ತುತ್ತ ತುದಿಯನೇರಿ
ಏರಿ ಏರಿದೊಲು ಅಂತರಂಗದೈಸಿರಿಯ ಜಗಕೆ ತೂರಿ
ಸತ್ಯ ಪ್ರೇಮಗಳ ಸತ್ವವನ್ನೆ ಕಣ್ಣೆದುರು ಎತ್ತಿ ತೋರಿ
ಬೇರೆ ಲೋಕದನುಭಾವ ಬೀರಿ ಹೋದನಾವ ದಾರಿ?

ಎನಿತು ಸರಳ ನುಡಿ, ಎಷ್ಟು ಸಹಜ ನಡೆ, ಮನದ ಮಹತಿಯೇನು !
ಅವನ ಎದೆಯ ಉನ್ನತಿಯ ನಿಲುಕುವುದು ಯಾವ ಗಿರಿಯ ಸಾನು?
ಇಹುದೆ ಅವನ ಕರುಣೆಯನು ಧರೆಗೆ ಕರೆವಂಥ ಕಾಮಧೇನು?
ಅವನು ಗೈದ ಲೀಲೆಯಲಿ ಲಯಿಸಿತೆಂಥವರ "ನಾನು-ನಾನು".

ತಿಳಿದಿಹುದು ಚಿತ್ತ, ಹರಿದಿಹುದು ನೋಟ ಮೇಲಕ್ಕೆ ಬಾನಿನೆಡೆಗೆ
ಆ ಜಾಡ ಹಿಡಿದು ಇಳಿದಂತೆ ಇಹುದು ಬೆಳಕೊಂದು ಕೆಳಗೆ ಇಳೆಗೆ
"ಏನೆಷ್ಟು ಭ್ರಾಂತಿ? ಕಾಣದೆಯೆ ಜ್ಯೋತಿ?" ಎಂಬರುಹು ಮೂಡಲೊಡನೆ
ಬೆಳಕ ನಂಬಿ ನಿಂದಿಹನು ಧೀರ ಎದೆ ತೆರೆದು ನಾಡ ಕರೆಗೆ.

## THE CELESTIAL LIGHT[1]

*D. S. Karki*

Gone is he far, far into the light blue of the sky—
His light remains here, but why does he not return?
That evening, on his way to pray at the temple,
Leaning his burden on his grandchildren,
He walked like a symbol of universal compassion,
Reached the temple steps and then stopped dead!
He cast aside his mortal weight
While his breath merged into the Divine breath.
His sacred blood flowed from his emaciated body,
Answering the call of the bullets,
And the world drowned in a sea of sorrow!
His hands folded in prayer still prayed
And pity for the killer lit his face!
Who can measure the purity of his heart?
Gone is he, now on the heights of self-sacrifice,
And as he ascended, he scattered over us his hearts' wealth,
Revealing the essence of truth and love—
He has given us taste of another world, but whither has he gone?
How simple in words, how natural in gait and how high in mind!
What peak can reach the height of his heart?
What *Kamadhenu*[2] can give us back his compassion?
Even the worst selfishness perishes in his service!

*Tr. K. Raghavendra Rao*

1. The celestial light is Mahatma Gandhi whose death the poem laments.
2. Kamadhenu is the all-giving celestial cow of heaven in Indian mythology.

# ಮೀನಗಾರನಿಗೆ

ರಸಿಕರಂಗ (ರಂ. ಶ್ರೀ. ಮುಗಳಿ)

ಏ ಮೀನಗಾರನೇ, ನೀನೆತ್ತಬೇಡೊ!
ಸೌಂದರ್ಯಸಾಗರದಿ ನಾ ಮಿಂದು ನಲಿವೆ.

ಆಮಿಷದ ಕೀಳುಹುಳದಾಸೆಯನು ಹಚ್ಚಿ
ಕಾಮಿಯೊಲು 'ಆ'ಯೆಂದು ಬಾಯ್ತೆರಸಬೇಡೊ.

ಯಾವಾಗಲೂ ನಿಲದೆ ನಾ ಸುಳಿವೆ ನಲಿವೆ
ಯಾವಾಗಲೂ ಅನಿಮಿಷನು ಆಗಿ ಸಾಗಿ.

ನಿತ್ಯವೂ ತೆರೆದಿರುವ ಸಿರಿಗಣ್ಣನಿತ್ತೆ
ನಿತ್ಯವಾಗಿಯು ನಡೆವ ಜೀವನವನೀಯೊ.

ಮೋಹಮಾಟಗಳಿಂದ ಸಾವಸೆರೆ ತರುವ
ಜಾಳಿಗೆಯ ಬೀಸಾಡಿ ಜೀವ ಕೊಳಬೇಡೊ.

ಓಲಾಡುತಿಹೆನು ಹಿರಿಹಿಗ್ಗಿ ನಾನಿಲ್ಲಿ
ಜಾಲದಲಿ ಹಿಡಿದೆನ್ನ ನಡೆ ತಡೆಯಬೇಡೊ.

## TO THE FISHERMAN

*Rasika Ranga (R. S. Mugali)*

Oh fisherman, do not lift me out!
Let me enjoy this bathing in the sea of beauty.
Tempt me not with the low worm
And urge my mouth to open with desire.
I wish to move ceaselessly and disport myself
Like the deathless Gods.
You have granted me the ever-open eye of beauty,
And grant me a life of endless movement.
Do not with the share of illusion cast
Your net of death and take away my life.
I am swinging here, brimming with joy,
But with your net, do not end my movement.

*Tr. K. Raghavendra Rao*



3

## ಮಂದಾರ ಹೂವಾ!

ರಸಿಕರಂಗ (ರಂ. ಶ್ರೀ. ಮುಗಳಿ)

ಬಂದಾರ ತಂದಾರ ಮಂದಾರ ಹೂವಾ
ಇಂದ್ರsನ ನಂದನದ ಪೂವಾಡಗಿತ್ತೇರು,
ಒಂದಾರ ಕೊಳ್ಳೀರೊ ಮಂದಾರ ಎಂದು
ಅಂದಾರ ಇಂದ್ರsನ ನಂದನದ ಚೆನ್ನೇರು.

ಅಂದಾದ ಅಂದೂಗಿ ಒಂದಾಗಿ ಬಂದು
ನಿಂದಾರ ಗಿಲಿಗಿಲಿಯ ನಾದದಲಿ ನೀರೇರು,
ಒಂದಾರ ಕೊಳ್ಳೀರೊ ಮಂದಾರ ಎಂದು
ನಿಂದಾರ ನಂದನದ ಪೂವಾಡಗಿತ್ತೇರು.

ವಾಸsವ ರಾಯsನ ಹಿರಿಹೂವು ಎಂದು
ದೇಶsವ ತಿರುಗಿದರು ಪೂವಾಡಗಿತ್ತೇರು
ವಾಸsವ ನೋಡಿಕ್ಕಿ ಬಿಡುವsರು ಹೂವಾ
ಲೇಸೆಂದು ಕೊಳ್ಳsವರ್‍ಯಾರಿಲ್ಲೊ ಜಗದಾಗ.

ಮುನಿದಾರ ಮನದಾಗ ತಿಂದಾರ ಹಲ್ಲಾ
ಮಂದಾರ ಹೂವೀನ ಪೂವಾಡಗಿತ್ತೇರು
ತಂದಾರ ಅಂದಾದ ಮಂದಾರ ಹೂವಾ
ಬಂದಾರ ಸುರುವ್ಯಾರ ನಂದನದ ಕೇರಿಯಾಗ.

ಅಂದಾರ ಇಂದ್ರsನ ಬಳಿಗೋಡಿ ಹೋಗಿ
"ಮಂದಾರ ಹೂವನು ಒಂದಾರ ಕೊಳಲಿಲ್ಲ
ಒಂದಾರ ಕೊಳಲಿಲ್ಲ ಲೋಕsದ ಮಂದಿ
ನಿಂದಾವ ಲೋಕsದ ಬಲುಹೂವು ಎಂದೇನೊ!"

## MANDĀRA FLOWER

*Rasika Ranga (R. S. Mugali)*

They came and they brought the Mandāra Flower—
Those flower-girls of Indra's garden
'Take one, at least one Mandāra'
So they said, the fair girls of Indra's garden.

They came with charming anklets on their feet
Ringing with a jingle sweet,
'Pray take one, at least one Mandāra'
So they said, the fair girls of Indra's garden.

'This is the great flower of God Indra'
Saying thus, the flower-girls roamed about
Some smell and drop the flower
O pity! there is none-not one in this world to buy it as the best.

Angry at heart, grinding their teeth,
They came back, the fair girls of Indra's garden
They brought the sweet Mandāra flowers
And cast them in the lake of Indra's garden.

They ran to Indra and said in despair
'None did buy the Mandāra flower
Not even one from among the people of the earth'
Perhaps because many a flower on earth is waiting unsmelt!

*Tr. the author*

## —ಗೆ

ವಿನಾಯಕ (ವಿ. ಕೃ. ಗೋಕಾಕ)

ನನ್ನ ಎದೆಯೊಳಗಿರುವ ಬೆಂಕಿಯು
ಇನ್ನು ಕೆಣಕಿಲ್ಲ
ನಿನ್ನ ಹೃದಯವನು!
ನನ್ನ ಬುದ್ಧಿಯೊಳಿರುವ ತೊಡಕು
ಇನ್ನು ತೊಡಕಿಲ್ಲ
ನಿನ್ನ ಬುದ್ಧಿಯನು!

ಗೆಳತಿ! ನಿನ್ನೀ ನಗೆಯ ಮೊಗ್ಗೆಯು
ನಳನಳಿಸಲಿಲ್ಲ
ನಳಿನದೊಲುಮೆಯೊಲು!
ಸೆಳೆವ ಕಂಗಳ ಕಾಂತಿಜಲವು
ತುಳುಕಿ ಬರಲಿಲ್ಲ
ಸಲಿವ ನಲುಮೆಯೊಲು!

ಹೇಗೋ! ಏನೋ! ಗೆಳತಿ ಕಾಣೆನು!
ಸಾಗಿ ಬರಲಿಲ್ಲ
ಯೋಗಸ್ಪರ್ಶವದು.
ಭೋಗದಾಸೆಯೊಳಿದ್ದ ನಮ್ಮಯ
ಭಾಗಕಿರಲಿಲ್ಲ
ತ್ಯಾಗದೂಟವದು.

ಭೂಮಿಯಾಕಾಶಗಳ ಪ್ರೇಮದ
ಆಳವಿರಲಿಲ್ಲ
ನಮ್ಮ ಪ್ರೀತಿಯೊಳು!
ಮೆಯ್ಯ ಕೀಳಾಸೆಗಳು ಕಳೆದಿಹ
ಶಾಂತಿಯಿರಲಿಲ್ಲ
ನಮ್ಮ ರೀತಿಯೊಳು!

## TO—

*Vināyaka (V. K. Gokak)*

The fire within my breast
    Has not enmeshed
    Your brain.
The tangle of my mind
    Has not entwined
    To your vein.

My love, our marigold
    Of joy would not unfold
    As full as the Lotus.
Our eyes' sensuous light
    Melted not outright
    To the fine afflatus.

Why, none can say as much
    —Our joy felt not the touch
    Of concecration.
Engrossed with earthenware
    We could not share
    The feast of renunciation.

Our love flowed not as deep
    As to take in a leap
    The sky and the earth.
Our joy knew not the peace
    Of sacrifice
    Of sensual mirth.

My love, what sage can tell
    What mysteries dwell
    Within our pain?
And why be vext? At least
    We remain and have kissed!
    Let the rest remain.

*Tr. Shankar Mokashi Punekar*

ಮಡದಿ ! ನಮ್ಮೀ ಪ್ರೇಮದೊಗಟವ
ಇಡಿ ಇಳೆಯೊಳಿಲ್ಲ
ಒಡೆದು ತಿಳಿವವರು !
ಮಿಡುಕಿ ಫಲವೇನಿಲ್ಲ. ನಾವೇ
ಕಡೆಗೆ ಇಹೆವಲ್ಲ
ಒಡನೆ ಬೆರೆವವರು !

# ಆದರ್ಶವಾದಿ

ವಿನಾಯಕ (ವಿ. ಕೃ. ಗೋಕಾಕ)

'ನಿನಗೀಗ ಬರಿ ಐದು—ಇಪ್ಪತ್ತು ಬೆಳೆದಿಂತು
ಬಹಳ ಎತ್ತರವಾದೆ'ಯೆಂದು ನುಡಿವಳು ತಾಯಿ.
'ನಿಂತಿಹೆವು ದಡದಲ್ಲಿ; ನಿನ್ನ ಹಡಗದ ಹಾಯಿ
ಮುಂದೊಯ್ಯುತಿದೆ ನಿನ್ನ': ಸಖರೊರೆವರೊಲವಾಂತು
ಎಳೆಯರೆಲ್ಲರು ಕೂಡಿ, 'ನೀನು ನೋಂಪಿಯನೋಂತು
ನಡೆವ ಬಗೆಯನ್ನರುಹು. ತೊದಲು ನುಡಿಯುವ ಬಾಯಿ
ಪ್ರೌಢಿಮೆಯ ಪಡೆವುದೆಂದೊ'ರೆದು ಮನವನು ತೋಯಿ-
ಸುವರು ಆನಂದದಲಿ. ನಾನು ಚಿಕ್ಕವನೆಂತು,

ಮತ್ತೆ ದೊಡ್ಡವನೆಂತೊ. ನಾನರಿಯೆ ! ನೆಲದಷ್ಟು.
ಮುಗಿಲಷ್ಟು ವರುಷಗಳು ನನ್ನ ಮಾಸಿಹವೆಂದು
ಜೀವ ನುಡಿವುದು ನಿತ್ಯ. ದಿಟವೆ ತಾಯಿಯ ಎಣಿಕೆ?
ಗಣಿತ ತಪ್ಪಿರಬೇಕು ನಿರ್ಧರಿಪ ಬಗೆಯೆಂತು,
ಜೀವಾತ್ಮ ಪ್ರಾಚೀನನಿರೆ ಕಾಲನಿರುವಷ್ಟು?
ಒಂದಣುವಿನಂತರವು ವಾರ್ಧಕ್ಯ—ಯೌವನಕೆ !

## BIRTHDAY

*Vināyaka (V. K. Gokak)*

"You are only five and twenty, how tall
How well you've grown," my mother says.
"We only bide the shore; but your vessel
Into the ocean sails, far and farther,"
My beloved friends with deepest feeling say,
And Youngsters in love's own moving accents pray:
"Teach us the way, the hard way you learned,
That our fumbling tongues majestic speech may find."

How young am I or old? I do not know.
The self within me says: "As old as the ancient earth
And the primaeval sky". Is my mother's reckoning right?
Her calendar may misguide. But how decide
When the Soul within is as timeless as time itself?
Youth and age only an atom divides.

*Tr. V. M. Inamdar*

# ಮುಕ್ತಜೀವಿಗಳು

ವಿನಾಯಕ (ವಿ. ಕೃ. ಗೋಕಾಕ)

ಮುಕ್ತಜೀವಿಗಳಿವರು
ಮುಗಿಲಿನಲಿ ಸಂಚರಿಸಿ
ಮೂಜಗವ ಸಲಹುವರು ಹಗಲು ರಾತ್ರಿ
ಇವರ ಪ್ರೀತಿಯೆ. ಇವರ
ಕಾರುಣ್ಯವೇ ಬೆಳಕು:
ಅವರ ಸುಳಿವನೆ ಹಿಡಿವಳೀ ಧರಿತ್ರಿ.

ವಿಶ್ವದೆದೆಯಲ್ಲಿರುವ
ಜ್ಯೋತಿದೇಹಿಗಳಿವರು.
ಇವರು ಮಿಡಿಯಲು ತುಂಬಿ ಬಹವು ಸ್ನಾಯು.
ಎಲ್ಲ ಕುಲ–ಲೋಕಗಳ
ಶಾಂತಿ–ಕಾಂತಿಗಳಿವರು.
ಇವರಾಜ್ಞೆಯಿಲ್ಲದಲುಗರು ವರುಣ–ವಾಯು.

ಎಲ್ಲ ತೇಜಸ್ವಿನವರು.
ಎಲ್ಲ ಓಜಸ್ವಿನವರು.
ಎಲ್ಲ ತಾಪಸರೆಲ್ಲ ಪುಣ್ಯವಿವರು.
ಸೃಷ್ಟಿ–ಸ್ಥಿತಿ–ಲಯಕಿರುವ
ತಾಲ ಲಯವೇ ಇವರು:
ಶ್ರೇಷ್ಠವೈ. ತ್ರೈಲೋಕ್ಯಗಣ್ಯರಿವರು.

ಇವರ ನುಡಿ ನುಡಿಯದಾ
ನಾಲಗೆಗೆ ಮಡಿಯೆಲ್ಲಿ?
ಇವರ ಕಾಣದ ಕಣ್ಗೆ ಮುಕ್ತಿಯೆಲ್ಲಿ?
ಇವರ ತೆಗೆದಪ್ಪದಾ
ತೋಳು ತುಂಬುವವೆಲ್ಲಿ?
ಇವರೊಲಿಯದಸುವಿಂಗೆ ಭುಕ್ತಿಯೆಲ್ಲಿ?

## THE MASTERS

*Vināyaka (V. K. Gokak)*

These the saviours, these the masters
That shield the world both night and day,
Riding on clouds and storms and moving
With constellations on their way:
These the Great whose love illumines
Paths that very few have trod;
These the Wise whose mercy beckons
Every son of earth to God.

These the shining ones, celestial,
Living in the world's deep core;
These the fullness over-brimming,
Pouring life through every pore;
Theirs the quiet and the splendour
That all tribes and worlds sustain;
Theirs the one primaeval will
That sets astir the wind and main.

These the wisdom of the ages,
The high lights of the universe;
These are, of three worlds, the masters
And kings of light; the rhythm that stirs
All that is and yet to be,—
Creation, evolution, doom;
Incarnations of infinite
Splendour in a little room.

Where the tongue that, not descanting
Their names, can still be eloquent?
Where the eyes that, not beholding
Them, deciphered heaven's intent?
Where the arms that, not encircling
Them, have loveliness embraced?
Where the mind that, uninspired
By them, has been with beauty graced?

ಬಾಳ ದೇಗುಲದಲ್ಲಿ
ಚಿರಸನಾತನರಿವರು;
ಬಾಳ್ಮೊದಲ ಬಲ್ಲವರು, ಬಹು ಪುರಾತನರು.
ಹೀಗಿದ್ದು ಯುಗಯುಗಕೆ
ಸಿಗುವ ಸನ್ನಿಧಿಯವರು:
ಸಂಕ್ರಾಂತಿಪುರುಷರ್ಕೈ, ನಿತ್ಯನೂತನರು.

ಗಾಳಿಯಲಿ ಬೀಸುವರು.
ಕಡಲುಗಳನೀಸುವರು.
ನಿಂತಗ್ನಿಯಲಿ ಕಾಸುವವರೆ ಇವರು.
ಮೋಕ್ಷಸುಖದಾಯಿನಿಗೆ,
ಬಾಳನಾರಾಯಣಿಗೆ.
ಶೇಷಶಯ್ಯೆಯ ಹಾಸುವವರೆ ಇವರು.

ಮಾನವನ ಹಿತಕಾಗಿ
ಜಗವ ಸಂಚರಿಸುವರು;
ಮಾಯೆಯನು ಬೀಸುವರು, ಸುರುಳಿಸುವರು;
ಅರಳಿರುವ ಕುಸುಮಗಳ
ಮರಳಿ ಮುಗಿಸುವರಿವರು;
ಅರಳಲಿಹ ಮೊಗ್ಗೆಗಳನರಳಿಸುವರು.

ನನ್ನ ಬಾಳಿರಲಿವರ
ಅರಿವಿಂದ, ಒಲವಿಂದ,
ಬಾಳಿಗರ್ಪಿಸುವ ಅರವಿಂದವಾಗಿ;
ನನ್ನ ಕಾವ್ಯವು ಗುಡಿಯು
ಭಕ್ತಮಧುಪರಿಗೆಂದು
ಸಂತರ್ಪಿಸಿರುವ ಮಕರಂದವಾಗಿ.

ಧಾರುಣಿಯುದಿರಲಿವರ
ತಿಳಿವಿಂದ, ಹೊಳವಿಂದ.
ಗುಡಿಯು ದಾರಿಯು ಧರ್ಮಶಾಲೆಯಾಗಿ;
ನಾಳೆ ಮನುಕುಲವನ್ನೆ
ಮುನಿಕುಲವನಾಗಿಸುವ
ಅತಿಮಾನವರ ಕರ್ಮಶಾಲೆಯಾಗಿ.

These the ancient, the eternal
In Life's temple; those who know
The secret springs of life; the makers
Of revolutions as they go
Beaming from age to age; the Presence
That the world aspires to view;
These the changing and unchanging
Souls for ever old and new.

In the winds they blow for ever;
The seven seas with foam they wreathe;
Ever burning in the fire,
In the seraphim they breathe.
Beneath the dreaming, milk-white ocean
They make the python-bed unseen
For Life who leads us on to splendour,
Of our Maker being the queen.

It is they who furl the flower
And unfurl the timorous bud.
'Tis their word,—dries up the oceans
Or swells the rivers in their flood.
It is they who cast forth *maya's*
Nets and catch us, even like fish.
They can lead us gently, kindly,
Out of error, if they wish.

May my life be as the lotus
Dedicated to Life's pleasure,
With the gentle benediction
Of the Masters as my treasure,
Blossoming near the holy shrine;
For piligrims, at the Ancients' will.
May my song be as the honey,
Bee-wise for them to drink their fill.

May the earth, at the Ancients' bidding,
Be as the caravanserai

On the way to peaks empyrean
Or else, beneath a boundless sky:
The seminary of supermen
Who, bent on their eternal quest,
Will make this world a paradise
And men divine, before they rest.

*Tr. the author*

# ನನ್ನ ದೇಹದ ಬೂದಿ

ದಿನಕರ ದೇಸಾಯಿ

ನನ್ನ ದೇಹದ ಬೂದಿ—ಗಾಳಿಯಲಿ ತೂರಿ ಬಿಡಿ,
ಹೋಗಿ ಬೀಳಲಿ ಬತ್ತ ಬೆಳೆಯುವಲ್ಲಿ;
ಬೂದಿ–ಗೊಬ್ಬರದಿಂದ ತೆನೆಯೊಂದು ನೆಗೆದು ಬರೆ,
ಧನ್ಯವಾಯಿತು ಹುಟ್ಟು ಸಾವಿನಲ್ಲಿ.

ನನ್ನ ದೇಹದ ಬೂದಿ—ಹೊಳೆಯಲ್ಲಿ ಹರಿಯ ಬಿಡಿ,
ತೇಲಿ ಬೀಳಲಿ ಮೀನ ಬಾಯಿಯಲ್ಲಿ;
ಮುಷ್ಟಿ ಬೂದಿಯ ತಿಂದು ಪುಷ್ಟವಾಗಲು ಮೀನು
ಧನ್ಯವಾಯಿತು ಹುಟ್ಟು ಸಾವಿನಲ್ಲಿ.

ನನ್ನ ದೇಹದ ಬೂದಿ—ಕೊಳದಲ್ಲಿ ಬೀರಿ ಬಿಡಿ,
ತಾವರೆಯು ದಿನದಿನವು ಅರಳುವಲ್ಲಿ;
ಬೂದಿ ಕೆಸರನು ಕೂಡಿ ಹೊಸ ಪಂಕಜವು ಮೂಡೆ,
ಧನ್ಯವಾಯಿತು ಹುಟ್ಟು ಸಾವಿನಲ್ಲಿ.

ಸತ್ತಮೇಲಾದರೂ ದೇಹ ಸೇವೆಗೆ ನಿಲಲಿ,
ಇಂದಿಗೀ ನರಜನ್ಮ ಸೇವೆಯೆಂದು
ತನ್ನ ಸ್ವಾರ್ಥವ ನೆನೆದು ವ್ಯರ್ಥವಾಗಿದೆ, ದೇವ,
ನಿಜ ಸೇವೆಗೈಯಲಿಕೆ ಬರಲಿ ಮುಂದು.

## MY ASHES

*Dinakar Desai*

Scatter my ashes in the wind,
And may they fall where the paddy grows!
If out of my fertilising ashes comes an ear of corn,
Fulfilled is my birth in death!

Float my ashes in the running river,
And may they feed the fish!
If the fish fatten on a fistful of my ashes,
Fulfilled is my birth in death!

Throw my ashes in the pond,
And may the lotus blossom daily!
If a lotus rises from mud and my ashes,
Fulfilled is my birth in death!

Even after death, may the body live to serve,
Believing that mortal life is all service.
But wrapped up in self, the body wastes,
And may it advance towards true service.

*Tr. K. Raghavendra Rao*

# ಮಂತ್ರಿಯು ನಿಧನ

ದಿನಕರ ದೇಸಾಯಿ

ಮುಖ್ಯಮಂತ್ರಿಗಳಿಂದು ನಿಧನ ಹೊಂದಿದರಂತೆ !
ಆಗಸಕೆ ನಗುವಿಲ್ಲ; ಬಿಸಿಲ ಕಾಣೆ.
ಸೂರ್ಯನಾರಾಯಣನು ಮುಗಿಲುಬಟ್ಟೆಗಳಿಂದ
ಕಣ್ಣನೊರಸುತಲಿಹನು ! ದೇವರಾಣೆ.

ಮೇಘರಾಜನಿಗಂತು ಹೇಳಲಾರದ ದುಃಖ;
ಕಣ್ಣೀರ ಹೊಳೆಯಾಯ್ತು ಅತ್ತು ಅತ್ತು.
ಇಂದು ರಾತ್ರಿಗೆ ಸೇರಲಿರುವ ತಾರಾಗಣದ
ಅಧಿವೇಶನವು ಕೂಡ ಮುಂದೆ ಬಿತ್ತು.

ಮಂತ್ರಿವರ್ಯನ ನಡತೆ ಇಂದ್ರದೇವನ ಹಾಗೆ;
ಸರಿಯಾಗಿ ಸಾಗಿತ್ತು ಕಾರಭಾರ.
ಪ್ರತಿವಾರ ಸಂಚಾರ, ಸತ್ಕಾರ, ಪರಿವಾರ,
ಊಟ–ಉಪಚಾರವೇ, ಪುಷ್ಪಹಾರ.

ಕಂಬನಿಯ ಬಿಡಬೇಡ; ಹೋದವರು ಬರಲಿಹರೆ?
ಈ ರೀತಿ ಅಳಬೇಡ, ಹುಚ್ಚಿ ನೀನು.
ಇಂದು ಸಂಜೆಗೆ ಊರ ಜನರೆಲ್ಲರೂ ಸೇರಿ
ಸಭೆಯೊಳಗೆ ಅಳಬೇಕು, ತಿಳಿಯಿತೇನು?

## ELEGY FOR A DEAD CHIEF MINISTER

*Dinakar Desai*

They say the Chief Minister died to-day!
Laughs not the sky, and no sun shines!
The Sun wipes the tears off his eyes
With a piece of sky-cloth, I bet!

Oh, what unspeakable sorrow for the cloud-king!
His tears flow into rivers!
The Assembly of stars, due to meet to-night,
Is hurriedly postponed!

The great man lived like *Indra*!
All had been going well with him—
Weekly tours, grand receptions, big entourages,
Excellent dinners and countless garlands!

Cry not; can the dead return?
Anyway, do not cry thus, mad woman.
You must cry properly in public
This evening at a public meeting!

*Tr. K. Raghavendra Rao*

# ಕೋರಿಕೆ

ಈಶ್ವರ ಸಣಕಲ್ಲ

1

ಜಗವೆಲ್ಲ ನಗುತಿರಲಿ,
ಜಗದಳುವು ನನಗಿರಲಿ !
ನಾನಳಲು ಜಗವೆನ್ನನೆತ್ತಿಕೊಳದೇ?
ನಾ ನಕ್ಕು, ಜಗವಳಲು, ನೋಡಬಹುದೇ?

2

ತೆರವಾಗಿ ನನ್ನೆದೆಯು,
ಧರೆಯೆದೆಯು ಉಕ್ಕಿರಲಿ !
ಧರೆಯೊಳಗೆ ತೇಲಿಸುವೆನೆನ್ನೆದೆಯನು !
ಧರೆ ಬತ್ತಿ, ಎನ್ನೆದೆಯು ಉಕ್ಕಲೇನು?

3

ಪೊಡವಿಯೈಸಿರಿವಡೆದು,
ಬಡತನವು ನನಗಿರಲಿ !
ಕೈಯೊಡ್ಡೆ ಪೊಡವಿಯೆನಗಿಕ್ಕದೇನು?
ಪೊಡವಿಯೇ ಮೈಯಳಿಯೆ, ಮಾಡಲೇನು?

4

ವಿಶ್ವವನು ತುಂಬಿರುವ
ಈಶ್ವರನೆ ಅಳತೊಡಗೆ,
ಸೈತಿಡಲು, ಸೈಪಿಡಲು, ಬರುವನಾವಂ?
'ಹೇ ತಂದೆ', ಎನಲೆನ್ನನವನೆ ಕಾವಂ?

## MY WISH

*Ishwara Sanakal*

Let the world smile in happiness
And let all tears be my share!
If I cry, the world can console me,
But if the world weeps, can I console it?

Let my heart be dry,
But let the world's heart overflow!
I may float my heart in the world's flow,
But if the world run dry, what can my heart do?

Let the earth be wealthy
And let poverty be my lot!
If I stretch my begging bowl, the earth will give,
But if the earth perish, what can live?

If He who fills all the universe,
*Lord Ishwara*, starts weeping,
Who can sustain me and console me?
If I cry Father, he will save me.

*Tr. K. Raghavendra Rao*

# ಹಸಿವು

ಜಯದೇವಿತಾಯಿ ಲಿಗಾಡೆ

ಕುಳಿತೊಮ್ಮೆ ಏಕಾಂಗಿಯಾಗಿ ಜಗದಾದಿಗಳ
ಯೋಚಿಸುವೆ, ವಿಶ್ವವೈಶಾಲ್ಯವನೆ ನೆನೆದು,
ಈ ವಿಶ್ವ ನಿನ್ನ ಲೀಲೆಯೆಂದು, ಮಕ್ಕಳಾಟವೆಂದು
ನುಡಿವರಲ್ಲ ! ನಾನರಿಯೆ ಏನೆಂದು ದೇವ.

ಇರುಳೆಲ್ಲ ಮನದಲ್ಲಿ ನೀ ನಿಂತು, ಬೆಳಗಾಗುತಲಿ
ಮಾಯವಾಗುವೆ, ಏನೊ ಹೇಳುತ್ತೇಳುತ
ಬೆರಗುಗೊಳಿಸುವಿ ಹಾ, ಅರೆಮರುಳೆ ನಾನು
ಎದ್ದು ಕುಳಿತೊಮ್ಮೆ ನಚ್ಚಿನಗುವೆ ನನ್ನ ನಾನೆ !

ಹಾ ! ಹುಚ್ಚಿ ಎನುತ ಬೆಚ್ಚಿ ಬೀಳುತ ನೋಡುವೆ
ಎಚ್ಚರಾಗಿ ನುಡಿಯಿಲ್ಲ, ನುಡಿಗಾರನಿಲ್ಲ, ನಡೆದಿದ
ಏನೊ ಎಂತೊ, ನಿನ್ನ ಮಗಳಾಗಿ ಆಡುವೆನು
'ಹುಡುಕು–ಅಡಗು' ಇದು ನನ್ನ ಬದುಕು–ಬೆಡಗು !

ಈ ಕಾಳ ರಾತ್ರಿಯಲಿ ನಿಶೆಯ ನಿಶ್ಯಬ್ದದಲಿ
ನಿದ್ರೆ ಬಾರದೆ ಮಹಡಿಯನೆ ಏರಿ ನಿಲ್ವೆ
ನಿಶೆಯ ಬಾಂದಳದೊಡನೆ ಒಡನಾಡುವೆ,
ಸ್ವಪ್ನದಲಿ ಮೂಕಗೊಂಡಿಹುದು ಜಗವು !

ಗಗನ ಗಂಭೀರದೆಡೆಗೆ ನೆತ್ತಿ ಎತ್ತಿ ನೋಡುವೆ
ಹಾ ! ಮುರಿಯಲಾಗದು ಮೌನ ಮಾನಸ
ಆ ಮೌನ ಬೆರಗು ನಿಬ್ಬೆರಗಿನಲಿ ಒಡನುಡಿದು
ಕಣ್ಣು ಮುಚ್ಚಿ ಕಾಣುವೆ ಹಾ ! ಎಂಥ ದರ್ಶನ !

## ASPIRATION

*Jayadevitai Ligade*

Sitting in solitude I think upon
The World's beginnings and its vast expanse:
They say it is Thy sport, a children's play;
But I, O Lord, know not what thing it be!

Thus dwelling in my heart throughout the night,
Thou vanishest at dawn; ay, while Thou speak'st,
Beguilest me; and I, half-witted one,
Wake up and sit and, blushing, smile at myself!

Calling myself a fool, I look about
On waking, and there's no talk, or one who talks;
I move I know not how; Thy daughter, I
Play hide-and-seek, my life a mystery.

In the night's absolute silence, sleep is not.
I walk upstairs and play with the night sky;
While the world soundless lies, as if in dream,
I lift my head towards the azure depths

And look. O do not break this silent Mind,
The silent wonder I behold, immersed
In greater wonder, with my blinking eyes.
Oh, what a vision, Oh, what sight divine!

My little eyes reflect a billion stars.
What marvel is this now? Thine Infinite
Is hidden in my soul, as in mine eyes
Is mirrored all the firmament's expanse.

Thy festal glory and Thy mercy's lake
Break out and rain their joy upon my heart;
My fortune, gathering joy's harvest, comes,
Burdened with bounty, to my spirit's door.

ಕೋಟಿ ಮಿಣುಕುಗಳೆಲ್ಲ ನನ್ನಯ ಚಿಕ್ಕ
ಚಕ್ಷುಗಳಲಿ ಬಿಂಬಿಸುತಿವೆಯಲ್ಲ,
ಏನು ಸೋಜಿಗವಿದು ನಿನ್ನನಂತವು ಎನ್ನ-
ಲಪಗಿಪುದು, ನೇತ್ರದಲಿ ಬಿಂಬಿಸುವ ಬಾನಿನಂತೆ.

ನಿನ್ನ ಮಂಗಳಮಹಿಮೆ, ನಿನ್ನ ಕರುಣೆಯಾ ಕಾಸಾರ
ಕವಲೊಡೆದು ಕರೆಯುತಿದೆ ಎನ್ನ ಮೇಲೆ
ಹರುಷ ವರ್ಷವಗರದು, ಸುಖದ ಸುಗ್ಗಿಯು ಬೀರಿ
ಸಾಗಿ ಬರುತಿಹುದು ಬಾಗಿಲಿಗೆ ಭಾಗ್ಯವೆನ್ನ !

ಮನದ ಮದವೆಲ್ಲ ಮುರಿದು ತಾಯೆಲ್ಲ
ಆ ಬೆಳಗು ಮಹಾ ಬೆಳಗಿನೊಳು ಒಂದುಗೂಡಿ
ತಿರುತಿರುಗಿ ತಿರುಗುತಿದೆ ಶಕ್ತಿರೂಪ
ಅಳಿಸಿ ಜೀವವ್ಯಾಪ ನನ್ನ ತಾಪ ಲೋಪ !

ಶಾಂತಿಸಾಗರ ನೀನು, ನಿತ್ಯ ನಿರವಯ ನೀನು
ಮತ್ತೆ ಅರುಹುವೆ ನೀನು, ಎತ್ತಿ ಪಾಡುವೆ
ಆತ್ಮಗೀತೆಯನೊಂದು ಸಾಂಬನಿದಿರಲಿ ನಿಂದು
ಸಿದ್ಧರಾಮ ಬೇರಿಲ್ಲ ನಾನಿನ್ನ ಕಳೆಯುಳಿದು ಎಂದು.

ತುಂಬುವೆನು ಈ ಕಾಯ ನಿಜದ ಸೀಯಾಳದಿಂ
ಸೀಯಾಳ ಗಟ್ಟಿಗೊಳ್ಳುತ ಕಾಯಿ ಬೆಳ್ಳಗಾದುದು;
ಬೆಳಗಾಗುತ ಎನ್ನ ಕಾಯ ಓ ಒಡೆಯ
ಒಡೆಯುವೆನು ಈ ಕಾಯ ನಿನ್ನಡಿಗೆ.

The insolence of mind is shattered, and,
The light dissolving in the greater light,
Thy form of Energy turns round and round,
Cancelling my life's cares, passions and stains.

Thou art the ocean of peace; Thou art eterne
And impartite; Thou lightest up my mind.
Standing before Thee, I sing a song of praise:
For Siddharama and Thou are both the same!

I fill my body with sweet water of
Reality; when this congeals, the fruit
Shows bright; and, after it is dawn, my Lord,
I break my body's fruit before Thy feet.

*Tr. Armando Menezes and S. M. Angadi*

# ಮೊಲೆಹಾಲು

ಎಸ್. ಡಿ. ಇಂಚಲ

1

ಅಮ್ಮಾ ! ನಿನ್ನೆದೆ ಹಾಲಿನ ಸವಿಗೆ
ಇನ್ನೇನಿದೆ ಸರಿ? ಹೇಳಮ್ಮಾ
ಅಮೃತವೆಂಬುದು ಇರುತಿರೆ ನಿರುತದಿ
ಇದುವೇ ತಾನೆ ಹೌದಮ್ಮಾ.

2

ಗಿಣಿ ಬಯಸುವ ರಸಬಾಳೆಯನೊಲ್ಲೆ
ರಸವೊಸರುವ ಇನಿಮಾವನು ಒಲ್ಲೆ
ಕಣ್ಮನ ತಣಿಸುವ ತನಿವಣ್ಣುಗಳು
ರುಚಿಸವು ನನಗೆ ಬೇಡಮ್ಮಾ.

3

ಅಂಗಳದಲಿ ನಾ ಹುಡಿಯಲಿ ಆಡಿ
ಧೂಳಿಯು ಮುಸುಕಿರೆ ನಿನ್ನೆಡೆಗೋಡಿ
ನೀ ನೀಡಿದ ತೋಳ ಸೆರೆಯನು ಸೇರಿರೆ
ನೀನೂಡಿದ ಮೊಲೆ ಸವಿಯೇನಮ್ಮಾ !

4

ತಿರೆಯನು ಜರೆಯುವ ದಿವಿಜರ ಕೂಸಿಗೆ
ಈ ಹಾಲಿನ ಸವಿ ಎರವೇನಮ್ಮಾ
ಅಂತಿರೆ ಕೇಳಿದೊ ಜನುಮಜನುಮದಲಿ
ನಿನ್ನವ ನಾನಾಗಿರಲಮ್ಮಾ.

## MOTHER'S MILK

*S. D. Inchala*

Tell me, oh mother,
What can compare with the milk of your breast?
If ever there be nectar,
What else can it be but this?

Who is after the bananas, the parrot's delight?
Who yearns for the juicy, sweet mango?
Luscious fruits may tempt other eyes and hearts
But in my mouth their taste is just flat.

After the play out in the yard,
Covered with dust I run to you,
And you, catching me in your arms, feed me
With your breast what can taste better?

Even a child of Gods that disdains the earthly,
Alas, has not this sweet milk,
And so I pray that through all my births,
I should be yours, mother!

*Tr. K. Raghavendra Rao*

# ಕುಂಕುಮ ಭೂಮಿ

ಕೆ. ಎಸ್. ನರಸಿಂಹಸ್ವಾಮಿ

1

ಅಗೆದಾಗ ನಕ್ಕದ್ದು ನುಣುಪು ಕುಂಕುಮ ಭೂಮಿ
ಗುದ್ದಲಿಯ ಕೆಲಸ ಅಲ್ಲಿಗೆ ನಿಂತಿದೆ.
ಪಂಚಾಂಗದಂತೆ ಮಳೆಯೂ ಬಿತ್ತು ಹತ್ತು ಹನಿ;
ಬೆವರಿಳಿದು ಬೊಗಸೆ ಹಾಗೂ ತುಂಬಿದೆ.

2

ಸರದಿ ಬದಲಾಯಿಸುವ ಕುದುರೆಯಾಳಿನ ನೆರಳು;
ಮುರಿದ ಅರಮನೆಯಲ್ಲಿ ರಾಜ ಠೀವಿ:
ದೇಗುಲದ ಗೋಪುರದ ತನಕ ಹಬ್ಬಿದ ಮರಳು;
ಹೂತ ಕಣ್ಣಿನ ಮುಂದೆ ಸೊನ್ನೆ–ಬೀದಿ.

3

ಚೆಲ್ಲಿದಷ್ಟೂ ಕಾಳು ಪಯಿರಾಗಲಿಲ್ಲೆನುವ
ಚಿಂತೆ–ಚಪ್ಪರದೊಳಗೆ ಚಿನ್ನದ ಕಿಡಿ;
ಬಿತ್ತ ಚೆಲ್ಲದೆ ಬೆಳೆದ ಹಳೆಯ ಮಾತಿನ ಭೂತ.
ಯಾರ ಅಬ್ಬರವಿಲ್ಲಿ ನಿಲ್ಲುವ ನುಡಿ?

4

ಕೈಗೆ ಸಿಕ್ಕಿದ್ದನ್ನೆ ಒರಗಿ ನಿಟ್ಟುಸಿರೆಳೆದು
ಹಳದಿಯಾಗಿದ್ದಾಳೆ ನಾಳೆ—ಬಸಿರಿ.
ಒಂದಿರುಳು ಹಿಗ್ಗು, ಏಳೆಂಟು ತಿಂಗಳ ನೋವು,
ಒಡಲ ತುಂಬುವ ಸಮಯ ಕಿರಣ ಲಹರಿ.

5

ಹೆಣ್ಣೋ, ಗಂಡೋ?—ಹೆತ್ತ ಮೇಲೆ ಹೆಸರಿಡಬಹುದು.
ಹುಟ್ಟಬಾರದು ಹೇಳಿಕೊಟ್ಟ ಮಾತು,
ಧೃತಿಗೆಟ್ಟ ಮಾತು. ಬೆಳೆಯಲಿ ತನ್ನತನದ ಮಗು.
ಕಣ್ಣು ಮಿಂಚಲಿ, ತಾಯಿ–ಹಾಲ ಕುಡಿದು.

## THE VERMILLION EARTH

*K. S. Narasimha Swamy*

When dug deeper smiled the earth of smooth vermillion;
The work of the spade has not proceeded further.
In obedience to astrological calculations, even a few drops of rain fell;
The cupped palms are full with the sweat that has flowed.

The shadow of horse-guards who wait in turns;
In the broken-down palace, regal style and pomp;
The sand spreading right up to the temple's conical tower;
Before the buried eyes, the street of emptiness.

In the dried grass awning of the worry
That all the seeds sowed haven't yielded harvest, a gold spark;
The talk of harvest without sowing is a mere ghost of old talk.
Whose power makes words stand here?

The pregnant tomorrow has turned yellow,
Leaning on whatever she can and sighing deeply
A night's bliss, eight to nine months of agony,
And the play of light when the body is being filled.

Male or female? naming can follow actual delivery.
Shouldn't be born the words prompted by others,
Words without strength, let self-reliant child of individuality grow,
Flash its eyes, drunk with mother's milk.

They say, those who signed in stone lived here,
Those who hunted wild bisons,
Those who pulled down the ant-hill with grown nails,
Those who laid low tall vultures,

Those who lived fully like an open book,
Inspired artists with fire in their bosom,

6

ಇಲ್ಲಿದ್ದರಂತೆ ಕಲ್ಲಲ್ಲಿ ರುಜುವಿಟ್ಟವರು,
ಕಾಡುಕೋಣನ ಬೇಟೆಯಾಡಿದವರು,
ಬೆಳೆದುಗುರಿಸಿಂದ ಹಾವಿನ ಹುತ್ತ ಬಗೆದವರು,
ಎತ್ತರದ ಹದ್ದುಗಳ ಕೆಡಹಿದವರು.

7

ಮುಚ್ಚುಮರೆಯಿರದೆ ಬಾಳಿದ ಪೂರ್ಣಜೀವಿಗಳು,
ಕೆಚ್ಚೆದೆಯ ತೇಜಸ್ವಿ ಕಲೆಗಾರರು,
ಬಿದ್ದ ಮಳೆ ಬೀಸುಗಾಳಿಗೆ ಮೈಯ ತೆರೆದವರು
ಉಪಶಾಂತರಾದಿವಂದ್ಯರು, ಸಹಜರು.

8

ಎಲ್ಲ ಶಿಖರಗಳಲ್ಲಿ ಬಾವುಟವ ನಟ್ಟವರು,
ಮೊದಲ ಬೆಳಗಿನ ಧ್ವನಿಯನೆತ್ತಿದವರು,
ಕೆಂಡ ಚೆಲ್ಲಿದ ಸಂಜೆಯಲ್ಲಿ ಮನೆಬಿಟ್ಟವರು,
ಎಷ್ಟು ಬೆಳಗಾದರೂ ಬಾರದವರು.

9

ಹುಟ್ಟಿದ್ದು ಗಟ್ಟಿಯಾಗಲಿ ಬೆಳೆದು ಅವರಂತೆ.
ತುಂಬು ರಕ್ತದ ಹಾಡು ಕೇಳಿ ಬರಲಿ
ನೆಲದೊಡಲ ಕೆಂಪು. ನೀರೊಡಲ ಹಾವಿನ ಹೊಲಿಗೆ
ಬಾನ ತಳಮಳ ಹೆತ್ತ ನೋವ ಸ್ಮರಿಸಿ,

10

ಹಸಿರೆಲೆಗಳಲ್ಲಿ ಮಾಸದ ಕಣ್ಣು ಥಳಥಳಿಸಿ
ತಪ್ಪು ಹೆಜ್ಜೆಗಳನ್ನು ಸರಿಪಡಿಸಲಿ,
ನೆಲದಾಳದಲ್ಲಿ ಬೇರಿಳಿದ ಮರಗಳು ಬದುಕಿ
ಎಲ್ಲ ಕಾಲಗಳಲ್ಲಿ ಹೂವ ತೊಡಲಿ.

Those who opened out their body to the fallen rain and blown wind,
The winners of peace, the respected from yore, the natural ones.

They planted their flags on every peak,
Raised the melody of the very first dawn,
Left home in the evening filled with flaming coal,
And did not return even in the hours of dawn.

Let what is born grow tough like them.
Let the full-blooded song be heard.
Remembering the red body of earth, the snake-woven body of water,
And the pain the sky had in conceiving a tumult,

Dazzling with unfaded eyes in the green leaves,
Let them set right the mistaken steps,
Let the trees with roots deep down the earth live,
And at all times bear perennial flowers.

*Tr. K. Raghavendra Rao*

# ತೆರೆದ ಬಾಗಿಲು

ಕೆ. ಎಸ್. ನರಸಿಂಹಸ್ವಾಮಿ

1

ಸಂಜೆಯೂ ಆಯಿತು, ನೀನೂ ಬಂದೆ—
ಬಸ್ಸು ಸಿಕ್ಕಿತೆ ನಿನಗೆ ಸಂತೆಯ ದಿನ?
ಇಷ್ಟು ಕತ್ತಲೆ ಮಾಡಿಕೊಂಡು ಬರುವುದೆ ಹೇಳು?
ನಿನ್ನ ಮಗುವಿಗೆ ಎಂದು ನಾಮಕರಣ?
ಇವಳು ಹೇಗಿದ್ದಾಳೆ? ಎಂದು ಬರುವಳು? ಗೊತ್ತು
ಬಂದೆ ಬರುವಳು; ಆದರೆಂದು? ಈ ಹೊತ್ತಿಗೆ
ಬತ್ತ ಬಡಿದಿರಬೇಕು; ಬಂಡಿ ಸಿಕ್ಕಿರಬೇಕು,
ಎತ್ತಿಗೇ ಕ್ಷಾಮವಿರಬೇಕು. ಕಾರಣವಿಷ್ಟೆ:
ಈ ಸಲವು **ತಂದೆಯುವರದು** ಬರುವ ಶನಿವಾರ:
ಬತ್ತ ಬರದಿದ್ದರೂ, ಬಾಳೆಯಾದರು ಬರಲಿ!
ನೀನೀಗ ಬಂದದ್ದು ಒಳ್ಳೆಯದು, ಒಳ್ಳೆಯದು;
ಊರ ಕಡೆ ಎಲ್ಲರೂ ಕ್ಷೇಮವಷ್ಟೆ?

ಹಿಡಿದ ಮಳೆ ಬಿಟ್ಟಿದೆ, ಈಗ ಚಳಿ ಹುಟ್ಟಿದೆ;
ಬಾ ಒಳಗೆ ಫ್ಲಾಸ್ಕಿನಲಿ ಕಾಫಿ ಇದ್ದರೆ ನೋಡು.
ಸಾಕೆ ಇಷ್ಟೊಂದಂಗಿ? ಅದರ ಮೇಲೂ ಶಾಲೆ?
ನೀನೇನು ಕೋತಿಯೋ ಕರಡಿಯೋ ಮಹರಾಯ?
ಮೂಲೆಗಿಡು ನಿನ್ನ ನಕ್ಷತ್ರ–ಚತ್ರಿಯ ಮುದುರಿ;
ನಿನ್ನ ಚಪ್ಪಲಿಗಿಲ್ಲಿ ಯಾರ ಭಯವೂ ಇಲ್ಲ.
ಈ ಹಳೆಯ ಕುರ್ಚಿ, ಈ ಚಾಪೆ ಎರಡೂ ಕೊಳೆಯೋ?—
ಇಲ್ಲಿರುವುದೂ ಕೊಳೆಯೆ, ಬರುವುದೂ ಕೊಳೆಯೆ!

ನನ್ನ ಮಾತೇ ನಿನ್ನ ಕಿವಿಗೆ ಬೀಳುತ್ತಿಲ್ಲ;—
ಬೀದಿಯಂಚಿಗೆ ನನ್ನ ಬಾಗಿಲಿರುವುದು ತಪ್ಪೆ?
ಬಾಗಿಲನು ತೆರೆದಿರುವುದೊಂದು ತಪ್ಪೆ?
ತೆರೆದ ಬಾಗಿಲು ನಾನು, ಸರ್ವಋತು ಬಂದರು;

## THE OPEN DOOR

*K. S. Narasimha Swamy*

### I

Well, it is evening, and you, too, have arrived—
How could you manage to board a bus on this busy, shandy day?
Why should you come at a time so dark?
When will they christen your child?
How is she, this one? When will she be here?
I am sure she will come, but when?
I guess the paddy has been harvested by now,
The bullock-cart available,
And perhaps a famine for bullocks,
Why? This time, too, father's death anniversary falls on a Saturday;
If paddy does not come, at least let the banana be there!
It is good, very good, that you have come now;
Is everybody doing well at home?

The rain-grip has just relaxed, giving birth to a bitter cold;
Please, come on in; see if there is any coffee left in the flask;
Is this quantity of shirt sufficient? Should it be covered with shawl?
What are you anyway, a dancing monkey or a bear, my dear fellow?
Fold up your star-pierced umbrella and dump in that corner.
Your chappals are safe here, fear not.
This old chair, this mat, are they both very dirty?
Well, whatever is here and whatever gets added are all dirty here!

I am afraid you are not listening to me at all;
Am I to blame if my door stands right on the street's edge?
Am I to blame for keeping the door open?
I myself am an open door; open to passing seasons.
Yes, my dear chap, it is all right you have come now;
If nothing else happened, at least we have become two now.

ಹೌದು, ಮಹರಾಯ, ನೀನೀಗ ಬಂದದ್ದು ಸರಿ;
ಏನಾಗದಿದ್ದರೂ ಇಬ್ಬರಾದೆವು ಈಗ.

ಹೋಟಲಿನ ಊಟ ಇನ್ನರ್ಧ ಘಂಟೆಯ ಮೇಲೆ;
ಈಗ ಅಲ್ಲಿಯ ತನಕ ಕಥೆಯ ಹೇಳುತ್ತೇನೆ—
ಕಥೆಯೇನು?—ಈ ಬೆಳಗಿನಿಂದ ಇಲ್ಲಿಯ ತನಕ
ತೆರೆದ ಬಾಗಿಲ ಮುಂದೆ ನಾನು ಕಂಡದ್ದನ್ನೆ,
ನಾನು ಮಾಡಿದ್ದನ್ನೆ;
ಹೇಳುತ್ತೇನೆ ಕೇಳು.

ಅಯ್ಯೊ, ಎಂಥಾ ಮಾತು!
'ಮನಸು ಅತ್ತಿಯ ಹಣ್ಣೆ ಬಿಚ್ಚಿ ತೋರುವುದಕ್ಕೆ?'
ಆತ್ಮವನು ಬಿಚ್ಚಿ ತೋರೆಂದವರು ಯಾರಯ್ಯ?—
ಅದಕೆ ಸಾಯುವ ತನಕ ಕಾಯಬೇಕಾದೀತು.
ಅಂಗಿಯನು ಬಿಚ್ಚುವುದು ನಮ್ಮ ಕೈಯೊಳಗಿಹುದು
ಕಳೆದುಕೋ ನಿನ್ನ ಹೊರೆಯನು, ಬಿಡು ಮೊರೆಯನು.

2

ಬೆಳಗಾಗ ಪೂರ್ತಿ ಎದ್ದಿರಲಿಲ್ಲ ನಾನು,
ಪತ್ರಿಕೆಯ ಹುಡುಗ ಬಂದಿದ್ದ, ನನಗೊಂದು ಸುದ್ದಿ ತಂದಿದ್ದ.
ಮೂರನೆಯ ಪುಟದಲ್ಲಿ ಅಪಘಾತವಾಗಿತ್ತು;
ನನ್ನದೇ ಹೆಸರಿನವನೀ ಬೀದಿಯುವನೊಬ್ಬ
ನಿನ್ನೆ ಲಾರಿಗೆ ಸಿಕ್ಕಿ ಸತ್ತನಂತೆ!
(ಸುದ್ದಿ ಪೂರಾ ಗದ್ಯವೆಂದು ಟೀಕಿಸಬೇಡ,
ಗದ್ಯದಲ್ಲೂ ಮಂದಿ ಸಾಯಬಹುದು.)
ಅವನು ಇದ್ದದ್ದೆ ಅಷ್ಟಾಗಿ ತಿಳಿದಿರಲಿಲ್ಲ,
ಸತ್ತದ್ದು ಎಲ್ಲರಿಗೆ ಗೊತ್ತಾಯಿತು.
ನನ್ನ ಮೇಲಾಕಾಶ ಕಳಚಿಬಿತ್ತು.
ಸತ್ತವನು ನಾನಲ್ಲವೆಂದು ನನಗೂ ಗೊತ್ತು;
ಆದರೂ ಕನ್ನಡಿಯಲಿಣಕಿನೋಡಿ,
ಕಾಲು ಝಾಡಿಸಿ ಮೈಯ ಮುರಿದೆ, ಎದ್ದೆ. ನಡೆದೆ,
ಹೊಸಿಲ ಮೇಲಿನ್ನೊಂದು ಮೊಳೆಯ ಹೊಡೆದೆ.
ಪಾಪ! ಯಾರೋ ಸತ್ತು ನನ್ನ ಹೆಸರಿಗೆ ಬಂದ
ಈ ಕಳಂಕವ ತೊಡೆದುಬಿಡುವೆನೆಂದು

Another half an hour, and it is time for the hotel meal;
Till then, I shall tell a tale—
What tale? About what I have seen from morning to now,
Sitting before this open door,
About all my doings in this time;
Listen to my narration.

God, what words!
"Is a man's mind a fig fruit to be opened up for inspection?"
But whoever asked you to open up your soul and show it?
That has to wait till death.
It is within us to take a shirt off,
And so, unburden and unskin yourself.

## II

In the morning I was not fully awake
When the newspaper boy brought me some news,
That on page three was an accident;
It seems someone with my name, belonging to this very street
Had died, crushed under a lorry!
(Don't blame me if the news is in prose,
For men can die in prose, too)
None know about his being alive
But his death is news reaching everybody.
The sky fell on me,
Though I was certain that I was not the dead one;
Yet I peeped into the mirror,
Stretched my limbs, loosened up by body, and get up
To walk to the wall and hammer a nail into it.
Dear me! Somebody died and besmirched my name—
I tightened my fists determined to set matters right.
Wrapped in the transparent, sacred bathing towel I rushed;
It was time for the tap-water to dry up.
Bathing in the Ganga of the available water,
I lit a ghee-wick for the dead man;
Worshipped God with stolen flowers.
A lizard stares at me with an evil glint from the wall;
I did not wait to hear its oracle.

ಬಿಗಿಹಿಡಿದ ಮುಷ್ಟಿಯನು ನೋಡಿಕೊಂಡೆ.
ಪಾಣಿಪಂಚೆಯನುಟ್ಟು ನೀರುಮನೆಗೋಡಿದೆ;
ನೀರು ನಿಲ್ಲುವ ಸಮಯ ನಲ್ಲಿಯಲ್ಲಿ.
ಇದ್ದಷ್ಟೆ ನೀರಿನಲಿ ಗಂಗಾಸ್ನಾನಮಾಡಿ
ಸತ್ತವನಿಗಾಗಿ ತುಪ್ಪದ ದೀಪ ಹಚ್ಚಿದೆ;
ಕದ್ದ ಹೂವಿರಿಸಿ ದೇವರಿಗೆ ಕೈಮುಗಿದೆ.
ಗೋಡೆಯಲಿ ಹಲ್ಲಿ ದುರುಗುಟ್ಟಿ ನೋಡಿತು ನನ್ನ;
ನಾನದರ ಶಕುನಕ್ಕೆ ಕಾಯಲಿಲ್ಲ.

ಸತ್ತೆನೋ ಕೆಟ್ಟೆನೋ ನೆರೆಮನೆಗೆ ನುಗ್ಗಿದೆ;
ಟೆಲಿಫೋನಿನಲ್ಲಿ 'ಸಂಪಾದಕರ ಕೊಡಿ' ಎಂದೆ.
ಆಯಮ್ಮನಿಗೆ ಉಗ್ಗು: 'ಇದ್ದಾರೆ, ಮಾತಾಡಿ'.
'ನಮಸ್ಕಾರ ದೇವರು, ಒಂದಲ್ಲ ಎರಡು—
ಒಂದು ಖಂಡಿತವಾಗಿ ನಿಮಗೆ, ಇನ್ನೊಂದು
ನನ್ನ ಹೆಸರಿಗೆ ನೀವು ಕಾಣಿಸಿದ ಲೋಕಕ್ಕೆ!
ನಿಮ್ಮದೇನೂ ಇಲ್ಲಿ ತಪ್ಪಿಲ್ಲ, ಅದು ನಿಜವೆ.
ಆದರೂ ಸುದ್ದಿ ಸಂದಿಗ್ಧವಾಗಿದೆ ಸ್ವಾಮಿ.
ಸೂರ್ಯ ಚಂದ್ರರ—(ಇನ್ನು ಬೇಡ ಚಂದ್ರನ ಸಾಕ್ಷಿ)—
ಬರೇ ಸೂರ್ಯನೊಬ್ಬನ ಸಾಕ್ಷಿಯಾಗಿ
ನಾನು ಬದುಕಿದ್ದೇನೆ. ಕೃಪೆಮಾಡಿ ತಿದ್ದುವಿರ?'
'ಹೌದೇನು? ಕ್ಷಮಿಸಿ. ಸರಿ. ನಾಳೆಯೇ ತಿದ್ದುವೆ;
ನೀವು ಬದುಕಿರುವುದನ್ನು ಎಲ್ಲರಿಗೆ ತಿಳಿಸುವ'.
ಎಷ್ಟು ನಿರ್ಲಿಪ್ತತೆ! ಎಂಥಾ ಸಮಾಧಾನ! ರಾಮ ರಾಮ!

ಚಾಕು ಹೋಯಿತು, ಕಂದ, ಚೂರಿ ಬಂತು;
ಕಪ್ಪು ಸೀರೆಯನುಟ್ಟು, ಕಣ್ಣೀರ ಹೂಮುಡಿದ
ಸಂತಾಪ ಪತ್ರಗಳ ನೆನಪಾಯಿತು;
ವಿಪರೀತ ಭಯವಾಯಿತು.
ನೇರ ಓಡಿದೆ ಅಂಚೆಮನೆಗೆ; ನೋಡಿದೆ ಒಳಗೆ
ಕಾರ್ಡು ಕವರಿಗೆ ಬಿದ್ದ ಹೊಡೆತಗಳನು.
ಒಬ್ಬ ಬಂದನು ಹೊರಗೆ ನಿರಪರಾಧಿ.
ನಾನವನ ತಡೆದು ನಿಲ್ಲಿಸಿದೆ; ವಿಷಯವ ತಿಳಿಸಿ,
'ನಾಳೆ ಸಂಜೆಯ ತನಕ ನನಗೆ ಏನೇ ಬರಲಿ,

Well, dead or ruined, I rushed to a neighbour's house;
Blared in the telephone, "Give me the editor",
And someone stammered, "He is on the line. Speak."
"Salutes—not one but two—
One for you,
Another for the nether world to which you have condemned my name!

True, it is not exactly your fault.
That news is neutral, sir.
Swearing by the sun and the moon (no, not by the moon now),
Rather awearing by the sun alone,
I categorically assure you that I am alive.
Oblige me, please by correcting the news."
"Is that so? I am sorry. We will correct it tomorrow;
The news of your living shall be announced."

Child, the knife has gone but a dagger has taken its place,
I remembered suddenly the condolence letters to come,
Donning a black saree, decked in flowers of sorrow!
I was dead seared.
I made straight for the post office,
Saw the heap of stamped covers and cards.
An innocent came out.
I stopped him, explained my plight, saying
"Till tomorrow evening, please let pile up here
All the mail addressed to me;
I shall carry it home later.
If you can help me that much,
I, my woman and children, will be in your debt."
Nodding his head, mumbling, "Something wrong with your head,"
He ran to the middle of the street.
On the way home I bled,
Pierced by thorns; remembered her.
It has been a month since she went to the village;
Paddy has not come and she, too, has not come.
Wives are always like this when visiting their natal home:
Well, let her come when she wants—
But you must understand now, there are
Immediate future implications of today's happenings.

ಬಂದದ್ದು ಬಂದಂತೆ ಇಲ್ಲೆ ಬಿದ್ದಿರಲಿ;—
ಬಳಿಕ ಬಂದೊಯ್ಯುವೆನು. ಅಷ್ಟು ಉಪಕಾರ
ಮಾಡುವುದು ಸಾಧ್ಯವಾದರೆ, ನಾನು ನನ್ನಾಕೆ
ನಮ್ಮ ಮಕ್ಕಳು ಕೂಡ ನಿಮಗೆ ಋಣಿಗಳು' ಎಂದೆ.
ಅವನಿಗೇನಾಯಿತೋ !—
'ತಲೆ ನೆಟ್ಟಗಿಲ್ಲ ನಿನಗೆ'ಂದು ಓಡಿದನವನು
ತಲೆಯನಲ್ಲಾಡಿಸುತ ನಡುಬೀದಿಗೆ.

ಬರುವಾಗ ದಾರಿಯಲಿ ಮುಳ್ಳು ಚುಚ್ಚಿ
ರಕ್ತ ಸುರಿಯಿತು; ಇವಳ ನೆನಪಾಯಿತು.
ಇವಳು ಹಳ್ಳಿಗೆ ಹೋಗಿ ಸರಿಯಾಗಿ ತಿಂಗಳು;
ಬತ್ತವೂ ಬರಲಿಲ್ಲ, ಇವಳೂ ಬರಲಿಲ್ಲ.
ತವರುಮನೆಯಿರುವ ಹೆಂಡತಿಯು ಪಾಡೇ ಹೀಗೆ:
ಎಂದಾದರೂ ಬರಲಿ ಎಂದುಕೊಂಡೆ. ಆದರೆ—
ಅರ್ಥಮಾಡಿಕೋ ಈಗ, ಮುಂದಿನ ವಿಚಾರವನು
ಈ ದಿನದ ಸಂದರ್ಭದಲ್ಲಿ, ತಿಳಿಯಿತೆ? ಅದಕೆ.
ನಾನು ಎಲ್ಲಕು ಮೊದಲೆ ಮೊದಲ ಬಸ್ಸಿನಲಿ
ಕಾಗೆ ಕರ್‍ರೆನುವ ಹೊತ್ತಿಗೆ ನಿಂತ ಮೆಟ್ಟಿನಲಿ
ಸುಬ್ಬುವನೋಡಿಸಿದ್ದು. ಬಂದಾರವರು
ಸರಿಹೊತ್ತಿಗಾದರೂ ಎಂದುಕೊಂಡಿದ್ದೇನೆ;
ನನ್ನ ಕೈಲಾಗುವುದನೆಲ್ಲ ಮಾಡಿದ್ದೇನೆ;
ತೆರೆದ ಬಾಗಿಲ ಮುಂದೆ ಕಾದು ಕುಳಿತಿದ್ದೇನೆ.
'ಸಪ್ತಮಂ ದೈವ ಚಿಂತನಂ'.

ನಿನಗವನು ಹಳ್ಳಿಯಲಿ ಸಿಕ್ಕದೆಯೆ ಹೋದದ್ದು,
ವಿಷಯ ತಿಳಿಯದೆ ನೀನು ಇಲ್ಲಿಗೇ ಬಂದದ್ದು,
ನನಗೆ ಎರಡೂ ಬಹಳ ಒಳ್ಳೆಯದು; ಒಳ್ಳೆಯದೆ
ನಮಗೆ ಆಗುವುದೆಲ್ಲ.—

## 3

ಈಗ ಎಲ್ಲಿಗೆ ಬಂತು?

ಮಧ್ಯಾಹ್ನ ಮನೆಗೆ ಬಂದಾಗಲೇ ಉರಿಬಿಸಿಲು:
ತಲೆಕೆಟ್ಟರೂ ನನಗೆ ತಲೆಯಿತ್ತು; ತಲೆನೋವು.

Therefore, I had to hurry Subbu to the village by first bus,
Without ceremony or dely—
I hope they will be here in right time;
I have done my best,
Have been waiting before the open door,
"The seventh way out is to turn to God."
You missed him in the village,
Arrived here totally ignorant of the situation—
Both are good happenings;
Whatever happens happens for our good.

### III

Where are we now?
I reached home when it was scorching noon;
It may be deranged but my head was there, aching.
My belly was hungry but just then the lovely smell of spices cooking
Was wafted from a neighbour's kitchen by a breeze,
Thanks to the kindness of the breeze.
Time was past for hotel meals.
Can you guess who came then?
Like three fires, three ages,
The consolidated goodness of three generations,
Came three hungry men, clad in clothes of ritual purity.
The door was open, and so they came in straight.
This is an off day for the servant maid,
And thus the good omen of stone-flour designs was missing in the frontyard.
They arrived here perhaps under a mistaken notion!
These days
The town's streets are beautified,
Rows of plants decorate their sides,
Flowers fill the circles and squares,

And old gutters are face-lifted with new covers;
Everything is transformed beyond recognition,
Earth's skin pulled out, pipes planted and wound with red sash.
Anyone can lose his way here!

ಹಸಿವು ಹೊಟ್ಟೆಯ ತುಂಬ. ಆಗ ನೆರೆಮನೆಯಿಂದ
ಘಮಘಮ ಇಂಗಿನೊಗ್ಗರಣೆ; ಗಾಳಿಯು ಕರುಣೆ.
ಹೋಟಲಿನ ಅನ್ನಕ್ಕೆ ವೇಳೆಯೂ ಮೀರಿತ್ತು;
ಯಾರು ಬಂದರು ಗೊತ್ತೆ?
ಮೂರು ಬೇಕಿಗಳಂತೆ ಮೂರು ಕಾಲಗಳಂತೆ
ಮೂರು ತಲೆಮಾರುಗಳ ಸುಕೃತ ಮೈವೆತ್ತಂತೆ
ಮಡಿಯುಟ್ಟ ಹಸಿದ ಮೂವರು.
ತೆರೆದ ಬಾಗಿಲು, ನೋಡು, ನೇರ ಬಂದರು ಒಳಗೆ.
ಕೆಲಸದವಳಿಗೆ ಇಂದು ವಾರದ ರಜ; ಸರಿಯೆ,
ಇಲ್ಲಿ ಬಾಗಿಲ ಮುಂದೆ ರಂಗೋಲಿ ಇರಲಿಲ್ಲ;
ತಪ್ಪು ಕಲ್ಪನೆಯಿಂದ ಇತ್ತ ಬಂದರೇನೊ!

ಅಥವಾ ಈಗ
ಊರ ಬೀದಿಗಳನ್ನು ಚಂದಮಾಡಿದ್ದಾರೆ,
ದಾರಿಯೆರಡೂ ಕಡೆಗೆ ಸಸಿಯ ನಟ್ಟಿದ್ದಾರೆ;
ವೃತ್ತ ಚೌಕಗಳಲ್ಲಿ ಹೂವ ಬೆಳಸಿದ್ದಾರೆ.
ಹಳೆಯ ಬಚ್ಚಲುಗಳಿಗೆ ಹಲ್ಲು ಕಟ್ಟಿದ್ದಾರೆ;
ಗುರುತು ಸಿಕ್ಕದ ಹಾಗೆ ಮಾಡಿಬಿಟ್ಟಿದ್ದಾರೆ.
ನೆಲದ ಚರ್ಮವ ಕಿತ್ತು ನೀರ ನಳಿಗೆಯ ಹೂಳಿ
ಕೆಂಪು ಬಟ್ಟೆಯ ಕಟ್ಟಿ ಹೊರಟುಹೋಗಿದ್ದಾರೆ.
ಬೀದಿ ತಪ್ಪುವುದಿಲ್ಲಿ ಯಾರಿಗೂ ಸುಲಭ!—
ತಪ್ಪು ಬೀದಿಗೆ, ತಪ್ಪು ಮನೆಗೆ ಬಂದರೇನೋ?

ಇವು ನನ್ನ ಚಿಂತೆ; ಬಂದವರಿಗೂ ಅನುಮಾನ:
'ಬಂದುದೆಲ್ಲಿಗೆ ನಾವು? ಮುಂದೆಲ್ಲಿಗೆ?'
ಚಾಪೆಯನು ಹಿಡಿದು ಗಡಿಯಾರವನು ನೋಡಿವರು:
ಜಿಂಕೆಗೂ ಹಸಿವು. ಹುಲಿಗೂ ಹಸಿವು. ನೋಡಿವರು
ತೆರೆದ ಬಾಗಿಲ ಕಡೆಗೆ, ತಡೆದೆ ನಾನು,
ಉಭಯಕುಶಲೋಪರಿಯ ಕಾಲಹರಣದ ಬಳಿಕ
ಬಾವಿಯೊಳಗಿದ್ದದ್ದು ಬಂತು ಮೇಲೆ,
ಆ ಮನೆಯ ನಂಬರೂ ಹನ್ನೊಂದು, ಇದರಂತೆ:
ಬೀದಿ ಮಾತ್ರ ಬೇರೆ, ಹಿಂದಿನದು ಮಹರಾಯ!
ಆ ಮನೆಯ ಕಿಟಕಿಯನು ಇಲ್ಲಿಂದ ಕಾಣಿಸಿದೆ.

May be these three lost their way, reaching a wrong house in a wrong street!
These were my thoughts, and the visitors, too, had second thoughts.

They asked, "Where are we? What next?"
Fidgeting with their deerskin mats, they looked at the clock;
The deer has its hunger, and the tiger its.
They were staring at the open door;
I halted them.
After polite exchanges,
The truth submerged in the well
Came to surface—
The other house had the same number as mine, eleven
But it was in a different street, one behind ours, thank God!
From here I pointed to them the window of the other house.
I pulled my ears, uttered the 'Pravara',
Prostrated before tem.

They blessed me with a century-long life, chanted ritual formulae,
These three guests who were like three fires, three ages.

Fifty already spent and fifty still there;
For my situation it was adequate;
The sea put to rest, the sky becalmed
And the earth I stood on becalmed,
I saw the three disappear beyond the open door:
Saw purificatory rice strewn all over the ground.

Peace! Peace! Peace!

*Tr. K. Raghavendra Rao*

ಕಿವಿಮುಟ್ಟಿ ಪ್ರವರ ಹೇಳಿದೆ, ಅಡ್ಡ ಬಿದ್ದೆ.
ಶತಾಯುವಾಗೆಂದು ಅಮೃತಮಂತ್ರಗಳಿಂದ
ಹರಸಿ ಹೋದರು, ನೋಡು, ಮೂರು ಬೆಂಕಿಗಳಂತೆ
ಮೂರು ಕಾಲಗಳಂತೆ ಒದಗಿದಭ್ಯಾಗತರು.
ಐವತ್ತು ಕಳೆದರೂ ಐವತ್ತು ಉಳಿದಿತ್ತು;
ನನ್ನ ಸಂದರ್ಭಕ್ಕೆ ಅಷ್ಟು ಸಾಕೆಂದೆದ್ದೆ.
ಶಾಂತವಾಯಿತು ಕಡಲು; ಶಾಂತವಾಯಿತು ಗಗನ;
ಶಾಂತವಾಯಿತು ನಾನು ನಿಂತ ಭೂಮಿ.
ತೆರೆದ ಬಾಗಿಲನವರು ದಾಟಿಹೋದುದ ಕಂಡೆ;
ನೆಲದ ಮೇಲೆಲ್ಲೆಲ್ಲು ಮಂತ್ರಾಕ್ಷತೆ.

ಶಾಂತಿಃ ಶಾಂತಿಃ ಶಾಂತಿಃ

# ಏನಾದರೂ ಮಾಡುತಿರು ತಮ್ಮ

ಎಂ. ಗೋಪಾಲಕೃಷ್ಣ ಅಡಿಗ

ಏನಾದರೂ ಮಾಡುತಿರು ತಮ್ಮ:
ನೀ ಸುಮ್ಮನಿರಬಾಡ:
ಆ ಸಸಿಯ ಕೀಳು, ಚಿವುಟೀ ಚಿಗುರ.
ಹೂವ ಕಂಡರೆ ಹಿಸುಕಿ ಬಿಸುಡು: ಹುಲ್ಲೆಲ್ಲೆಲ್ಲಿ
ಅಲ್ಲಲ್ಲಿ ಕೊಳ್ಳಿ, ಹಿಡಿದಾಡು ಲಂಕಾದಹನ.
ಮರಿಚಿಟ್ಟೆ, ಗಿಳಿ. ಗುಬ್ಬಿ—ಎಲ್ಲಿ ಕಂಡರೆ ಅಲ್ಲಿ
ಅಟ್ಟು, ಹಿಡಿ, ಕಟ್ಟು: ಕಿತ್ತೆಸೆ ಪಕ್ಕಪುಕ್ಕಗಳ.
ಕಾಡಾನೆ ಹೊಕ್ಕ ನಂದನದಲ್ಲಿ
ಬಿಕ್ಕುತಿದೆ ಇಲ್ಲಿ ಮಲ್ಲಿಗೆ ಅಲ್ಲಿ ಹೊಂಬಾಳೆ.
ಸುತ್ತಲೂ ಗೋಡೆಮೇಲೆಲ್ಲ ಪೌರುಷಬಲದ
ಸ್ವಿಚ್ಚು; ಕಣ್ಣನು ಮುಚ್ಚು:
ಒತ್ತು ಹತ್ತಿಪ್ಪತ್ತನೊಂದೆ ಸಲ: ನೆಲ, ನೀರು, ಆಕಾಶ—
ಬಂಗಾರಮೊಟ್ಟೆಕೋಳಿಯ ಹೊಟ್ಟೆ—ಬಗೆ. ಸೀಳು.
"ಮಾಡು. ಇಲ್ಲವೊ. ಮಡಿ"
ನಿನ್ನ ನಾಲ್ಕೂ ಕಾಲ ನರ್ತನಕೆ ಪ್ರತಿನಿಮಿಷ
ಏನಾದರೊಂದಕ್ಕೆ ಜಖಂ ಆಗದಿರೆ ನಿನ್ನ
ಅದ್ಭುತ ಪ್ರತಿಭೆಗೇ ಕುಂದು ಕಂಡೆಯ. ತಮ್ಮ.
ವಾನರನ ಮಾಡಮಾಡುತ್ತಲಿ ವಿನಾಯಕನ ಮಾಡಿಬಿಟ್ಟರು ಸರಿಯೆ.
ಯೋಚಿಸುವುದಳೆದು ಸುರಿವುದು ತೂಗಿ ತೂರುವುದು—
ಈ ಎಲ್ಲ ಗತಕಾಲದಾಪತ್ತು:
ಸತ್ತಭಾವದ ಸಾಯಲಾರದ ಪ್ರೇತಸಂಪತ್ತು.

ಕಾಡು ಇದೆ. ಕಡಿ: ಸಿಗಿದು ಕಟ್ಟು ತೋರಣ. ಕೈಲಿ
ಕೊಡಲಿ ಇದೆ. ಮಚ್ಚು. ಗರಗಸ. ಕತ್ತಿ. ಎತ್ತೆತ್ತಿ
ಆಡಿಸಾಡಿಸು—
ಮಾಗಿಯಲ್ಲಿ ಸುತ್ತಲು ಮಬ್ಬು ಕವಿದಾಗ,
ಮೋರೆ ಮೋರೆಯ ಮಧ್ಯೆ ಒಂದೆರಡು ಗೆರೆ ಮಂಜುಗೋಡೆ ನಗವೆದ್ದಾಗ.

## DO SOMETHING, BROTHER

*M. Gopālakrishna Adiga*

Do something, brother:
Something, anything:
You mustn't be idle.
Pull out this plant, nip this little leaf,
Crunch that flower.
There's grass, run
Your faggots through.
Butterflies, parrots, sparrows—chase
Them, hold them, cage them, pluck
Their wings and pull their fur and feather.
There in the garden grow, for the wild elephant's feet,

All over, your walls
Virility's master-switchboards
Itch for your fingers. Close
Your eyes and pull twenty down.
Earth, Water, the Skies, they are all
Your geese with golden eggs.
Gouge them: slash them.

'Do, or die', they say.
For your genius' galloping dance
Disasters are the test.
Brother, act, act at once, do something.
Thought's weights and measures
Are all for the past,
For the dead's undying ghostly treasures.

There's the forest, cut it
Clean to the stump, slit it for your buntings.
You have the axe, the sickle, the saw
And the knife; go, harvest all the world
With a brandish of your hand—

ದಾರಿ ಕಣ್ಣೆದುರು ಕವಲೊಡೆದು ಸಿಡುಸುಯ್ದಾಗ,
ಎರಡು ಗಿರಿಶಿಖರ ತಲೆಯೆತ್ತಿ ಮಾರ್ಮಲೆದಾಗ,
ಪಾರಮದ ಮೇಲೆ ಮೋಹಿಸಿ ಕಣ್ಣು ಹೊಡೆದಾಗ—
ಚಿಂತೆಯೇ, ಧರ್ಮಸಂಕಟವೆ?
ಛೀ, ತೆಗೆ; ನೀನು ಸರಳ—
ಅದೆ ನಿನ್ನ ಹೆಗ್ಗಳಿಕೆ;
ಕಣ್ಣಪಟ್ಟಿಯ ಕುದುರೆನೋಟ ನಿನ್ನಗ್ಗಳಿಕೆ.
ಕೈಗೇನೆ ಸಿಕ್ಕಿದರು ತಿನ್ನು;
ಕಣ್ಣಿಗೆ ಏನು ಬಿದ್ದರೂ ಅದ ಹಿಡಿದು ಹಿಂಡು;
ಕಾಲಿಗೆ ಏನು ತೊಡರಿದರು ಅವ ಒಡಿದು ಕತ್ತರಿಸು.
ಈ ಅಬಲೆ
'ಮಲಗಿರುವ ತಾಯಿ ಪೃಥಿವೀ'
ಸುಸ್ತಾಗಿ ಇಲ್ಲಿ ಮಲಗಿದ್ದಾಳೆ; ಮುಗಿಲಕಡೆ
ಕಣ್ಣನೆತ್ತಿದ್ದಾಳೆ.
ಅವಳ ಅಂಗಾಂಗದಲಿ
ಒಂದಿಷ್ಟು ರಕ್ತ ಜಿನುಗುವ ತನಕ ಅದ ಕಚ್ಚಿ ಹೀರು.
ಮಾಂಸವಿಲ್ಲವೆ?
ಮಾಂಸ?
ಮೂಳೆನರ ಮಜ್ಜೆ ತೊಗಲಷ್ಟಾದರೂ ಇಹುದೊ ಅಲ್ಲೊ!
ಅಹಹಾ, ಗಂಡು ನೀ ಕಣೋ!

ಆ ಅಲ್ಲಿ ಇಹುದು ಜೀವದ ಬಾವಿ.
ಕಟ್ಟು ಯಾತವ—ಯಾತಕಾದರೇನಂತೆ ಅದು—
ಮೊಗೆ ನೀರ.
ಬಾವಿತಳ ತೊಳಸು ಹನಿಬನಿಯು ಕೊನೆ ಸಿಗುವತನಕ.
ಪಾತಾಳಗರುಡಿ ಇಳಿದಿಳಿದು ತಡಕಲಿ ತಳವ.
ಅಣುವನೊಡೆ, ಮಹತ್ತನು ಪಡೆ.
ಬ್ರಹ್ಮಾಂಡಕ್ಕೆ ತೊಟ್ಟುಬಿಡು ಬ್ರಹ್ಮಾಸ್ತ್ರ.
ವಿಜಯೀಭವ.

ಏನಾದರೂ ಮಾಡುತಿರು ತಮ್ಮ : ಸುಮ್ಮನೆ ಕೂತು
ನೆಲಕೆ ನೀ ಬರಿ ಭಾರವಾಗಬೇಡವೊ; ನೆಲದ
ಭಾರ ಕಳೆಯಲು ಹೀಗೆ ಮಾಡು ನೀ ಸರಿ, ಸಹಜ.

But
Winter mists;
Light foggy walls that line
The space between your face and mine;
The road sighs and breaks in two
Under the eyes,
A couple of mountain–peaks rear their hoods
And lower upon your head;
Or lightning–winks from sirens
That sing on every tree:
Do they plunge you
Into anxieties and dilemmas of reason?

No, no, this won't do.
You are a simple man,
And that's your strength.
Horse–sense and the blinkers
Are your forte.
Eat what comes to the hand; crush what you touch;
Cut the hindering vines.
Mother Earth herself, though tired,
Lies open to the skies; there's still flesh
Upon her bone, marrow for your hunger.
Come, come, brother forget never
That you are a man!

Then there's the Well. Rope
The wheel and axle, pull all
The water out. Reach the last dryness
Of the rock; grope, grope with the grappling iron.
'V for Victory', brother.
Gain the God's own arrow,
And aim it straight at the heart
Of God's own embryo—world.
Do something, anything,
Anything, brother.
Idle men
Are burdens on the land.

Do brother, do something.
Keep doing something all the time
To lighten Mother Earth's loads.
This is right. This is natural.
This is the one thing needful.

*Tr. A. K. Ramanujan*

# ಭೂಮಿಗೀತ

ಎಂ. ಗೋಪಾಲಕೃಷ್ಣ ಅಡಿಗ

## 1

**ಹುಟ್ಟು:**

ಮಲೆಘಟ್ಟ ಸೋಪಾನ ಕೆಳಪಟ್ಟಿಯಲಿ;
ಉರುಳು,—ಮೂರೇ ಉರುಳು.—ಕಡಲ ಕುದಿತವ ಪಿಣ್ಣೆಕೊಪ್ಪರಿಗೆಗೆ.
ತೆಂಗುಗರಿಗಳ ಬೇಸಿ ಕೈಚಾಚಿ ಕರೆದಳು;
ಅಡಿಕೆಗೊನೆಗಿಲಕಿ ಹಿಡಿದಾಡಿಸಿದಳು.
ಕಬ್ಬಿನಾಲೆಯ ತಿರುಪಿನಲ್ಲಿ ಕುಳಿತೆರೆದಳು ಅಜಸ್ರಧಾರೆಯ ಕರುಳತುಡಿತವನ್ನು:
ಭತ್ತ ಗೋಧುವೆ ರಾಗಿ ಜೋಳ ಮೊರಮೊರಪೌರಿಯಲ್ಲಿ ಮಾಂಸದ
ಹಾಡನೂಡಿಸಿದಳು;
ಗಂಟೆ ಗೋರಟೆ ಜಾಜಿ ಮಂದಾರ ಮಲ್ಲಿಗೆಯ ಗಂಧಗಿರಿಶಿಖರದಲಿ
ಮಲಗಿಸಿದಳು;
ಹಕ್ಕಿಗೊರಳಿಂದುಗುವ, ತುಂಬಿ ಮರ್ಮರವೊರೆವ. ಜಾಮೂನುನಾದದಲಿ
ಜಾಳಿಸಿದಳು;
ಆಕಾಶದಲ್ಲಿ ಪೋಡವ ವಿಶ್ವರೂಪಕ್ಕೆ ಕೆಳಗೆ ಜೀವಜ್ಯೋತಿ ಕೂಡಿಸಿದಳು.

**ಎಳಹರೆಯ:**

ಹಾಡಿಯಲಿ ಮರಮರದ ಕೆಳಗೆ ಧೂಪದ ವಟ್ಟಕಾಯಿ
ಚಿಗಿತೆಳಮೊಳಕೆ, ನೆರಳು, ಕೇಕೆ;
ಮಳೆಮಂತ್ರದಂಡ ಮುಟ್ಟಿದ ತಿಟ್ಟುನಿಟ್ಟಿನಲಿ ನೆಲವೆಲ್ಲ ಮೊಳೆ. ಮೊಳಕೆ.
ಕೊನರು, ಸಸಿ, ಗಿಡ, ಹುಲ್ಲು;
ತೋಟಗೋರಟೆಗೆ ಮೈಯೆಲ್ಲ ಕಾಮನ ಬಿಲ್ಲ ಬಲ್ಬುಮಾದಕದೀಪ.
ಚೆಲ್ಲು, ಗುಲ್ಲು.
ನಂದಬಟ್ಟಲನೆತ್ತಿ ತುಟಿಗಿಟ್ಟು ಸರ್ತಿಸಿತು ಅಂದುಗೆಯನಾಡಿಸುತ
ಬಂದ ಭೃಂಗ;
ಹಿತ್ತಲ ಜಗಲಿ ಮೇಲೆ ಕುಳಿತು ಧುಮ್ಮಿಕ್ಕಿದೆನು ಕೆಳಗೆ ಮತ್ತೂ ಕೆಳಗೆ
ತಳಕೆ ಕುಂಗ.

# EARTH'S SONG

*M. Gopālakrishna Adiga*

I

**Childhood**

On the lower treads of the hill stairs, just
Three tumbles and you're down to the boiling oil cauldron of the
sea,—

She outstretched and beckoned
Waving palm fronds
She dandled me
Rattling nut bunches.
In the cane-press trundle seated, she exuded gut throbbing

Endless streams
Filled flesh, the song
Into paddy, wheat, millet winnowed,
Lulled me to sleep in the fragrant hill peak
Of Gante, Gorate, Jāji, Mandāra, Mallige,
Rinsed me in the vibrant damson of birdsong.
In the sky–in the cosmic curvature of cloud–she beneath
Infused life's flare.

II

**Boyhood**

In the gorge, under trees, trees
The dense fruit of vapour, tender shoot, moan, whoop;
Wherever the mind of rain touched her anatomy,
The whole earth, shoot, spray, branch, plant, grass.
Through and through the garden Gorate the intoxicated rainbow-
bulb light,

The scatter, pell-mell,
The bee drew near, jingling its ankle bells,
Danced, kissing, pressing the cup-flower to its lips.
I sat on the rear verandah and plunged down, down further.

ಪಸುರುತೆರೆ ಅಪ್ಪಳಿಸುತಿರೆ ಮೇಲೆ ನೊರೆಕಾರಿ. ಬೀಸುತಿರೆ ಬಿರುಗಾಳಿ
ಗುಡುಗು ಮೊಳಗೆ.
ತಳದಾಣಿಮುತ್ತುಗಳ ಮುತ್ತದೀಪ್ತಿಗೆ ಕಣ್ಣು ಕುಕ್ಕಿ ಕುರುಡಾಡಿದೆನು
ಸಂಜೆವರೆಗೆ—
ಬುಂಡೆಗಂಟಿದ್ದ ತುಟಿ ಕಿತ್ತರೂ ಕಲ್ಪನೆ ಹೆಂಡಹೊಂಡದ ಸೆಲೆಯ ಹುಡುಕುತಿತ್ತು.
ಬೇಲಿಮೇಗಡೆ, ಗದ್ದೆಯಂಚಲ್ಲಿ, ತೋಪುಗಳ ಅಂಗುಲಂಗುಲದಲ್ಲಿ
ತೋಟದೊಳಗೆ
ಎಲ್ಲೆಲ್ಲು ಹೆರಿಗೆಮನೆ: ಬೇನೆ. ಸಂಕಟ. ನಗೆ; ಕೊರಡು ಚಿಗುರಿದ
ಚೆಲುವು, ಚೀರು, ಕೇಕೆ.
ನರ್ಸುಗಳು ಡಾಕ್ಟರರು ಹೆರಿಗೆಮನೆಯೊಳಹೊರಗೆ
ಅವರ ಬೆನ್ನಿಗೆ ಸದಾ ನಾಲ್ಕು ಮಂದಿ;
ತೊಟ್ಟಿಲಂಗಡಿಯಲ್ಲಿ ಬೊಂಬು ತುಂಬಾ ಅಗ್ಗ;
ಜಾತಕರ್ಮಾದಿ ನಿರತ ಈ ಪುರೋಹಿತಭಟ್ಟ ಅಪರಪ್ರಯೋಗದಲಿ ಪಾರಂಗತ.
ಮರಿಮರಿಯ ಹೊರೆಹೊರೆಗಳಾಡಿದುವು ಮಣ್ಣಿನಲಿ,
ಹೊಟ್ಟೆಹೊಸೆದುವು ಜಾರುತೊಗಟೆಯಲ್ಲಿ;
ರೆಕ್ಕೆ ಬಡಿದುವು ಶೂನ್ಯ ಬೀದಿಯಲಿ, ಚಪ್ಪಾಳೆಯಿಕ್ಕಿ ಕುಣಿದುವು
ಮೋರಿಮೋರಿಯಲ್ಲಿ—
ಮಧ್ಯಾಹ್ನದುರಿಬಿಸಿಲು ಹೆತ್ತ ಹೆಣಬಣಬೆಗೂ ಪಾಚಿಗಟ್ಟಿದ ಜಿಗಣೆ—
ಜೀವ ಹಲವು.

ಆಹ. ಪ್ರಾತಃಕಾಲದಲ್ಲಿ ಬೆಳಕಿನ ದಾಹ:
ಯಮುನಾಂಭದಲ್ಲಿ ಕಾಳಿಂದಿ ಹೆಡೆಮಣಿಯಾಟ.
ಕದಕದಕೆ ಕಿಟಕಿ ಕಿಟಕಿಗೆ ಕಣ್ಣು, ಮನೆ ಕಣ್ಣು. ಊರೆಲ್ಲ ಕಣ್ಣು. ಕಾಡೆಲ್ಲ ಕಣ್ಣು:
ತಿರುಗಿತ್ತು ಮಗುಮಾದರಿಯ ಕ್ಯಾಮರಾ ಕಣ್ಣು;
ಲೀಲುಲೀಲನು ಜಡಿದು ಗಿಡಿದ ಕತ್ತಲೆ ಕೊಠಡಿಮೇಲೆ ಮಸ್ಲಿನ್‌ಫರದೆ
ಹಾಸುತಿತ್ತು.
ಒಳಹೊರಗುಗಳ ಅಳಿವೆಯಲ್ಲಿ ಮೊರೆದ ತರಂಗಮಾಲೆಯಲಿ
ಮುತ್ತು. ಬಂಗಾರ. ಹೀರಕ, ಪುಷ್ಯರಾಗ. ಗೋಮೇಧಿಕ. ಕೆಂಪು. ಹಳದಿ.
ಎಲ್ಲಿ ಬಿದ್ದರೆ ಅಲ್ಲಿ ಅಲ್ಲಿ ನಾಗರ ಬಂಧ: ತುಟಿಗಗಸ್ತ್ಯಧರವ
ತುರುಸು—ತೋಟ;
ಕಣ್ಣು ಬಿಟ್ಟರೆ ಬಣ್ಣಬಣ್ಣ ಗೊಗ್ಗರು ಗಲಭೆ: ಕಿವಿತುಂಬ ಹಸುರು, ಬಿಳಿ.
ಹಳದಿ, ಕೆಂಪು.
ಹಣೆಗೆ ತುಂಪುವ ಹಚ್ಚಿ ಬಿಟ್ಟ ಬೆಕ್ಕಿನ ತರಹೆ ಬುಗುರಿ ತಿರುಗಿವೆ
ಬಾಲ ನಿಮಿರಿಸುತ್ತ;

Above, the banging green waves foaming
As the storm blew and the thunder roared:
On the sea bed, I glued my eyes to the heady glow of pearls
And groped till twilight.
As the lips were being pulled from the toddy-pot
Fancy was feeling for the dregs.

Over the hedgerow along the field's border,
In every inch of grove, within the garden everywhere,
A place of labour; anguish, agony, smile.
The loveliness of the budding spray, shriek, whoop.
In and out of the labour ward, nurses and doctors—
At their backs always people.
Bamboo is cheap in the cradle-shop;
An expert in birth-ritual, this priest is peerless in funeral-rites.

Clusters and colonies of spawn rolled in mud
Crawled on their bellies up the slippery bark
Flapped their membranes in the deserted streets
Clamped and danced in gutters.
Even in the corpse haystack spawned by the searing noonday sun

A little life, the leech in moss.
Oh, the thirst for light at dawn—
In the bowels of the Yamuna
The dance of the head-gem of Kalinga
On every door the forming eye on every shutter
The house an eye, the town an eye, the forest an eye.
The child-like camera eye looked about, swung round
Hung up its spools and spools in the darkened chamber
And drew the muslin drops.

At the inter section of the inner and outer
Amid the rearing garland of waves
Pearls, gold, diamonds, amethysts, red, yellow
Wherever they fall, there and there, the coiling snake embrace.

On the lips, the itch of Agastya.
If you open your eyes, the cacophony of colours

ತಾಯಿಗೂ ಮಿಗಿಲಾಗಿ ಎದೆಗವಚಿಕೊಂಡಳೋ;
ತಿರುತಿರುಗಿ ತನ್ನ ಬಸಿರಲ್ಲಿಟ್ಟು ನವೆದಳೋ;
ಹಕ್ಕಿಕೊರಳನು ಹಿಚುಕಿ ಲಾಲಿ ಹಾಡಿದಳು;
ಸಸಿಕೊರಳ ಕೊಯ್ದು ತಿಂಡಿಯನು ತಿನಿಸಿದಳು.
ಪ್ರೇಮ ಧೃತರಾಷ್ಟ್ರನಿಗೆ ಭಗ್ನ ಬಲಭೀಮ: ಎಲ್ಲು ಕೃಷ್ಣನ ಕಾಪು ಕಾಣಲಿಲ್ಲ.
ಇವಳೆದೆಗೆ ಬೇರಿಳಿದ ಕಾಲು ನನ್ನದು; ಬರಿದೆ ನಕ್ಷತ್ರಲೋಕಕ್ಕು ರೈಲು ಬಿಟ್ಟೆ.
ಹೆಂಕುಳಿಯ ಹಾಗೆ ನರಸತ್ತು ಹುಡುಕಿದೆ ಮನದ ಬಚ್ಚಲಲಿ
ಕೊನೆಯಿರದ ಕೊನೆಯ ಬಟ್ಟೆ

ಈಡಿಪಸ್ಸಿನ ಗೂಢ ಪಾಪಲೇಪಿತ ನಾನು;
ಟ್ರ್ಯಾಕ್ಟರನ್ನೇರಿದೆನು; ಉತ್ತೆ, ಸಿಗಿದೆ.
ಬಿತ್ತಿದೆನು. ಬೆಳೆದೆ ಅಟಂಬಾಂಬು ಕಾಳುಗಳ;
ಮಾರಕಕ್ರಿಮಿಪ್ಪೈರ ಗೋರಿ ನಲಿದೆ.

ಕರೆಯುವುವು ಮತ್ತು ಮತ್ತೂ ಬಾನ ಹಕ್ಕಿಗಳು;
ಗಾಳಿದರಬಾರಿಗರುವತ್ತು ಕರೆಯೋಲೆ;
ಕಿವಿಸುತ್ತ ಬಂದು ಕರ್ಣಪಿಶಾಚಿ ಪಿಸುಗುಟ್ಟಿ ಕಾಡಿದುವು ಮೇಲೆ. ಮೇಲೆ.
ಮಂತ್ರವಾದಿಯ ಕುತಂತ್ರದ ರಗಳೆ ಜೋರಾಗಿ ರೇಗಿದೆನು ನಾ ಬರಿದೆ
ನನ್ನ ಮೇಲೆ;
ಥಿಕ್ಕಿ ಹೊಡೆದೆನು ಪಂಜರದ ಕಂಭ, ಮಾಡಕ್ಕೆ;
ಚೀರಿ ಬಡಿದೆನು ರೆಕ್ಕೆ, ಕುಕ್ಕಿ ಪುಕ್ಕವ. ಕಿತ್ತು ರಾಶಿ ಹಾಕಿದೆ
ತಿಂಡಿತಟ್ಟೆಯೊಳಗೆ.

## 2

ಮರಿಕುದುರೆ ಕೆನೆದು ಕುಣಿದಿತ್ತು; ಸುತ್ತಲು ಹುಲ್ಲು, ಹುರುಳಿ;
ಬಂಗಾರದ ಕಡಿವಾಣ, ರನ್ನಲಗಾಮು;
ತಲೆಮೇಲೆ ಮೂರು ಬಣ್ಣದ ಮುಕುಟಗರಿ ಬೆಡಗು;
ಹಿಂದೆ ಕರಕರಕಟರು ಷಾಃಪಸಂದಿನ ತೊಡವು.
ನಡಮುರಿವ ತನಕ ನಡದದ್ದೆ ಸುಗ್ಗಿಯ ಕುಣಿತ.
ಆ ಬಳಿಕ :
**'ಮೈಯೆ ಭಾರ, ಮನವೆ ಭಾರ'**
ತ್ರಾತ್ತಿಕಿಟೋ ತಿಮ್ಮಣ್ಣಾ,
ಅತ್ತೆಮನೆಗೆ ಸೊಸೆ ಹೋಗುವುದ್ಯಾಂಗೋ ತಿಮ್ಮಣ್ಣಾ?
ತಿರುಪತಿ ತಿಮ್ಮಪ್ಪನ ಪಾದವೇ ಗತಿ ಅಣ್ಣಾ.
**'ಕಾಸು ಕೊಟ್ಟವರಿಗೆ ಕೈಲಾಸ ತೋರ್ಪಳು ಈಚಲ ಮರದವ್ವ, ನಮ್ಮವ್ವ'**

Green, white, yellow, red, bursts the ears:
The top spins, tail erect, like a cat with a pat of ghee on its
forehead.

Did she hug me to herself more than a mother?
Weave me into her womb again and again?
She sang me a lullaby, wringing a bird's neck;
She fed me her tit-bits, cutting the shoot necks.
In the embrace of loving Dhritarashtra
Was mighty Bheema crushed—
Nowhere here, the providence of Krishna descried.
My feet have struck roots in her breast
But I rushed futilely to the stars;
Like a eunuch I floundered in the empty bath pit
For the endless last trail of cloth.
Smeared with the sin of OEdipus, I clambered into a tractor,
Ploughed, harrowed, sowed and grew grains Atom-bombs;
On a harvest of lethal germs I danced.

They call me again and again, the birds of the sky;
Numerous summonses to the wind's court;
Prowling round my ears ill rumours
Whispered, perturbed me again and again.
The pother of the witch's sorcery's spell
Grown clamorous, I ranted
Merely against myself, crashed against the pillars, roof of the cage
Screaming, fluttered my wings, pecked and pulled cut feathers
And heaped them in my hopper.

The little pony whinnied and frisked;
Grass all around, gram, a golden bit, coloured reins;
On its head a colourful coquettishness of feathers:
Behind, the click licketty-split sporting of the "King's Delight",
And the unceasing harvest dance, till the waist sags.
And then:
"The body was heavy, the mind was heavy"
Tattikitto Timmana.
"How does the bride draw near her in-laws' house?"
My brother, your only refuge is the feet of Tirupati Timmappa.

ವೇದ, ಶಾಸ್ತ್ರ, ಪುರಾಣ, ಭಜನೆ, ಹರಿಕಥೆ—ಪೂಜೆ.
ಎಣ್ಣೆತೀರುತ್ತಲಿರೆ ಒಡಕು ಹಣತೆಯ ಮುಂದೆ ಬತ್ತಿ ಹೊಸೆತ.
ಆಗಲೂ ಬಿಡಳಿವಳು ತಾಯಿ; ಮಣಿಸಿನಕಾಯಿ ಹೊಗೆ ಹಾಕಿ
ತುರಿಯುಪಳು ಎದೆಯ ಗರಟೆ.
ಬಿದಿರುಮೋಣೆಯ ಮೇಲೆ ಕುಳಿತು ಸಾಗುವ ವೇಳೆ—ಹೊರಬರಳು;
ಅವಳಿಗಿನ್ನೊಂದು ಹೆರಿಗೆ.

3

ನೆಲತಾಯ ಮಾಯಕದ ಅರಗಿನರಮನೆಯಲ್ಲಿ
ಹಸ್ತಿನಾಪುರದ ಸ್ಮೃತಿ ಹೊತ್ತಲಿಲ್ಲ.
ಮಯನಿರ್ಮಿತವೊ, ಸುಯೋಧನರಚಿತವೋ ಅಂತು ಕಡ್ಡಿಗೀರುಪತನಕ
ಶಂಕೆ ಇಲ್ಲ.
ನಾನಲ್ಲಿ ನಲಿದೆ; ನುಣ್ಣನೆ ನೆಲದಿ ಜಾರಿದೆನು:—
ಹೊರಜಗಲಿಯಿಂದ ಒಳಮನೆಯ ಕತ್ತಲೆವರೆಗೆ.

**"ಯಾರು ನಿಂದವರಲ್ಲಿ? ತಾಯೆ?" ಎಂದೆ**
**"ತಾಯಿ? ಏನೀ ಭ್ರಾಂತಿ? ಹೋಗು, ಪೆದ್ದ!"**
**"ಚಂಡಿ, ಚಾಮುಂಡಿ ಪೇಳ್, ಬೇಕಾದುದೇನು?"**
**"ಗಂಡುಸಾದರೆ ನನ್ನ ಬಲಿಕೊಡುವೆಯೇನು?"**

ಇವಳ ಹೊಟ್ಟೆಚರಂಡಿಗಾರು ಕುಕ್ಕಿದರಯ್ಯ. ಕಳ್ಳಬಸುರಿನ ಯಾವ
ಜಾಣರಂಭೆ!?
ಗಂಗೆಯಲಿ ತೇಲಿ ಬಂದನು ಕರ್ಣ, ರಾಧೇಯ: ಸಾಯಿಸಲಿಕಲ್ಲದೇ ಬರಳು
ಕುಂತಿ.
ಮೈಯಿಲ್ಲ ಹೆರಿಗೆಮನೆ ಮಸಣ ಇವಳಿಗೆ. ಸ್ವರತಿಸಂಪ್ರೀತೆ:
ಮಲಿ, ಚಿರತೆ, ಆನೆ, ಹಸು, ಆಡು, ಕೋಡಗ, ಕತ್ತೆ:
ಮಾವು, ನೇರಿಳೆ, ಹಲಸು, ಜಾಲಿ, ಜಾಜಿ—
ಇವು ಇವಳ ಸಹಜಸಂತಾನ;
ಈ ಪೆಡಂಭೂತ ನಾ ಬರುವ ಗಳಿಗೆಯೊಳೀಕೆಗೇಕೆ ಹುಟ್ಟಿತೊ ವಿಷಮ-
ರತಿ ದುರಾಶೆ!
ಬಿಟ್ಟರೋ ಕಾಡಲ್ಲಿ ಕಣ್ಣುಕಟ್ಟಿ:
ಸುತ್ತಲೂ ಬಿಗಿದಿಟ್ಟು ಮುಳ್ಳು-ತಂತಿ.
ಕುಡಿಯಲುಪ್ಪಿನ ನೀರು: ತಿನಲು ಬೆಂಕಿಯ ಚೂರು:

"The Goddess of the toddy palm, our mother
Will show Heaven to those who pay, to those who pay."
Veda, Shastra, Purana–ritual worship:
The wick twined in front of the broken lamp
As the oil is giving out.
Even then, this mother will not let me go;
Will scour the shell of my breast
In the fumes of chillies:
And, in the moment of the journey on the bamboo bier,
She will not come out; she is preoccupied with another delivery.

**III**

In my step-mother's enchanted palace of shellac
The memory of Hastinapura did not ignite.
Maya's creation or Suyodhana's makes no odds—
There's nothing to fear till the match is struck.
There I danced, skated on the smooth floor
From the verandah to the dark inner room.
" 'Who is there? Mother' I said
'Mother? What nonsense–go, fool!'
'Chandi, Chamundi say, what dost thou desire?'
'If you are a man, dare you sacrifice me?' "
Who was it slung her bowels in the gutter?
What sly, spuriously pregnant Rambha?
Karna came floating in the Ganga, the son of Radha;
Except to kill, Kunti will not come.
All over her body she has childbirth clinics, cemeteries,
This lover of masturbation.
Tiger, elephant, leopard, cow, goat, donkey,
Mango, Jamun, Jack; these are her natural progeny.
In the moment of my coming, why did she stir in this she devil
Heterosexuality?
They left me in the jungle, blindfold,
Around me taut barbed wire, salt water to drink, ashes to chew,
Leg-irons for me to dance in.
I was the guest. To serve me came six friends,
A burning candle, glaciers of wax all round
And the wick finally charred and crackling.

ಕುಣಿಯಲೇದೇ ಬೇಡಿ ಕಾಲ ತೊಡವು.
ಆಗಂತುಕನು ನಾನು ಅತಿಥಿಸತ್ಕಾರಕ್ಕೆ ಸಾಗಿ ಬಂದರು ಆರು ಮಂದಿ ಸಖರು;
ಉರಿವ ಮೇಣದ ಬತ್ತಿ; ಸುತ್ತ ಮೇಣದ ಗಡ್ಡೆ ಹೊಳೆ:
ಬತ್ತಿಯೂ ಕೊನೆಗೆ ಕರಕು, ಕರಕು.

ನೆಲತಾಯಿ ಮಲತಾಯಿ.
ಉತ್ತಾನಪಾದನಿಗೆ ಸುರುಚಿ; ಧ್ರುವನಕ್ಷತ್ರಕ್ಕೆ
ಕಾಡ ಮೂಲಕವೆ ಪಥ ಆಗಸಕ್ಕೆ.
ಆರಣ್ಯಕರ ಮೌನಮಂತ್ರ ಬಿಚ್ಚಿದ ಬಟ್ಟೆ.
ತೆಗೆದುಕೋ ನೀ ಕೊಟ್ಟ ಎಲ್ಲ ವಸ್ತ್ರವಿಲಾಸ:
ಈ ಕೋಟು, ಈ ಶರಟು, ಈ ಶರಾಯಿ;
ಈ ಭಗ್ನ ಜೋಪಡಿಯೂ ನಿನ್ನದೇ; ತೆಗೆದುಕೋ:
ಬತ್ತಲಾಗದೆ ಬಯಲು ಸಿಕ್ಕದಿಲ್ಲಿ.
ಅಲ್ಲದಿರೆ ಬೀದಿಯಲಿ ನಾ ಸರೀಕರ ಕೂಡೆ ತಲೆಯೆತ್ತಿ ನಡೆಯಲಾರೆ:
ಬತ್ತಲಾಗದೆ ಕತ್ತಿ ಕಿತ್ತೆಸೆಯ ಬಲ್ಲುದೇ ಕವಚಕುಂಡಲ
ಹೃದಯದಮೃತಕಲಶ?

4

ವಿಶ್ವಾಮಿತ್ರ ಹೇಳಿದ: "ತ್ರಿಶಂಕು, ನಡೆ ಸ್ವರ್ಗಕ್ಕೆ."
ತೊಗಲು ಬಾವಲಿ ಮರದ ಜೋಲುತೊಗಟೆ.
ಕೆಸರಲ್ಲಿ ಹುಗಿದ ಕಾಲನ್ನು ಕೀಳುವುದೆಷ್ಟು ಕಷ್ಟ ಅಷ್ಟೇ ಕಷ್ಟ—
ಆಕಾಶಪಂಜರದ ಹೊನ್ನ ಸರಿಗೆಯ ನಡುವೆ ನಡೆವ ಹಗರಣ ಕೂಡ.
ಕೆಸರೋ ಅಸಹ್ಯ: ಹುಟ್ಟಿದ ಕೂಡಲೇ ಕೊಳೆವ ಎಳಕಸದಪಸ್ಮಾರ
ಬಾಲಲೀಲೆಯ ಚಟ್ಟ—
ಮಣ್ಣು, ಪೂರಾಮಣ್ಣುದೊಂಬೆಯಾಗಿದ್ದರವು ಒಂದು ತೆರ:
ಈ ಬೊಂಬೆಯಲ್ಲು ಉಸುರಿನ ತಂತ್ರ;
ತಂತ್ರದಾಚೆಗೆ ಶುದ್ಧ ಬೆಳಕುಮಂತ್ರ—ಫಿತೂರಿ.
ಹೆಜ್ಜೆಮೂಡದ ಹಾದಿ ಗಾಳಿಬೀದಿ.

ಇದು ನೋಡು, ಇದು ಕಷ್ಟ: ಧೂಳು ಧೂಳಿಗೆ ಸೇರಿ,
ಗಾಳಿ ಗಾಳಿಗೆ ಕೂಡಿ,
ಬೆಂಕಿ ಬೆಂಕಿಯ ಕೂಡಿ,
ಗಾಳಿಯಲ್ಲುಲುಹು ಆಕಾಶದಲ್ಲಾಕಾಶ ಬೆರೆತು ಹೋದರೆ ಇದಕ್ಕೇನು ಧಾಡಿ?

Earth mother is a step-mother,
Suruchi to Utthanapada.
Only through the jungle
Is the pathway to the sky,
Is the road to the pole star:
The silent chant of the forest sages
Is the stripped cloth.
Take back all the finery you gave me,
This coat, this shirt, these trousers—
This remshackle hut is yours, too,
Take it.
Without disburdening, one can't locate the green fields here:
But for this, I cannot hold my head erect and walk
Among equals.
Can the sword pluck and throw away
The invisible armour, the nectar bowl of the heart,
If it is not nacked?

IV

Viswamithra said: "Trishanku, get to heaven":
(The leathery bat, the pendant bark of the tree)
How difficult it is to extricate one's leg from the mire;
As difficult, the commotion among golden layers in the sky cage.
Mire is filthy indeed; the madness of the fresh placenta
Rotting soon after birth; the bier of infant life.
It's one thing to be mud, total clod—
But in the clod, the trick of breath
And beyond the trick, the incantation of pure light-conspiracy!
Without footprint's sanction the path is merely air.
Look here, this is hard:
When dust with dust, air with air, fire with fire, ether with ether,
Merge, what is wrong with the residue?
There is a residue still, an electric wire,
The message from beyond the stars, and transmissions,
The shape emerging from the bowels of the earth,
One to one making atonement, making play, making dance,
magic,
—Some say they don't know where the switch is;
They have forgotten the address of the head office:

ಏನೊ ಉಳಿವುದು ಮತ್ತೆ:
ಒಂದು ವಿದ್ಯುತ್ತಂತಿ—
ತಾರೆ ನೀಹಾರಿಕೆಗಳಾಚೆಯ ಸಮಾಚಾರ;
ಪಾತಾಳದಾಳದಿಂದೆದ್ದು ಬರುವ ವಿಕಾರ;
ಒಂದನೊಂದಕೆ ಕೂಡಿಸಾಡಿಸುವ, ಕುಣಿಸುವ ಚಮತ್ಕಾರ.
ಕೆಲರು ಹೇಳುವರು ಸ್ವಿಚ್ಚೆಲ್ಲೋ ತಿಳಿಯದೆಂದು;
ಮೂಲದ ಕಛೇರಿಯ ವಿಳಾಸ ಮರೆತಿದೆ ಎಂದು;
ಇಲ್ಲೆ ಎಲ್ಲೋ ಇರುವುದೆನ್ನುವರು ಉಳಿದವರು.
ಕತ್ತಲಲ್ಲಿ, ಕಣ್ಣು ಕಾಣದ ಬೀದಿಯಿಕ್ಕಟ್ಟಿನಲಿ
ಗೋಡೆ ತಡಕುತ ಇನ್ನು ತೆವಳಬೇಕು.
ಹೆಳವನ ಹೆಗಲ ಮೇಲೆ ಕುರುಡ ಕೂತಿದ್ದಾನೆ;
ದಾರಿ ಸಾಗುವದೆಂತೊ ನೋಡಬೇಕು.

Others insist it must be around here somewhere—
In the darkness, in the blind jammed alley
One must crawl hereafter, groping along walls:
The blind man rides the lame:
How the path unfolds remains to be seen.

*Tr. Michael Garmon & Rajeev Taranath*

## ಕವನ ಜನನ

ಕಾವ್ಯಾನಂದ (ಸಿದ್ದಯ್ಯ ಪುರಾಣಿಕ)

ಬಗೆಯ ಬಾನಲ ಬಣ್ಣವೇಳರ
ಬಿಲ್ಲ ದಿಬ್ಬಣ ಸಾಗಿದೆ
ಎಲ್ಲೊ ಒಂದೆಡೆ ಭಾವ ಬುದ್ಧಿಯು
ಹಸೆಗೆ ನಿಲ್ಲುವ ಹಾಗಿದೆ.

ನೀಲಮೇಘದ ಮೇಣೆ ನೂರಿವೆ
ಹೊತ್ತು ಮಿಂಚಿನ ಹೆಂಗಳ
ಎನಿತೊ ದಿನಗಳು ಕಳೆದ ಮೇಲಿದೊ
ಮತ್ತೆ ಮಸಗಿದೆ ಮಂಗಳ.

ಹಿಂದೆ ಮುಂದೆಡಬಲದಿ ನಡೆದಿದೆ
ರಜತ ರಶ್ಮಿಯ ಲಾಸ್ಯವು
ಮೇಣೆ ಮೇಣೆಗೆ ಇಣುಕಿ ನೋಡುವ
ಮಿಂಚಿನಂಗನೆಯಾಸ್ಯವು

ಬಣ್ಣಬಣ್ಣದ ಹಕ್ಕಿಗಳ ಬಾ-
ವುಟಗಳೇಸೋ ಸಭದಲಿ
ಚೆಂದವೆಲ್ಲೆಡೆ ಚೆಲ್ಲವರಿದಿದೆ
ಶೋಭೆ ಸೇರಿದೆ ಶುಭದಲಿ.

ಹೊಳೆವ ತುಂತುರ್ವನಿಯೆ ಅಕ್ಷತೆ
ಸಾಂಧ್ಯಸ್ವರ್ಣಿಮೆ ಅರಿಶಿನ
ಹೊಂಗದಿರ ಮಾಂಗಲ್ಯ, ಸಂಜೆಯ
ಕೆಂಪು ಕುಂಕುಮ ಚಂದನ.

ಬಗೆಯ ಬಾನಲಿ ಬಣ್ಣವೇಳರ
ಬಿಲ್ಲ ದಿಬ್ಬಣ ಸಾಗಿದೆ
ಎಲ್ಲೊ ಒಂದೆಡೆ ಭಾವ ಬುದ್ಧಿಯು
ಹಸೆಗೆ ನಿಲ್ಲುವ ಹಾಗಿದೆ.

## POETRY

*Kāvyānanda (Siddayya Puranik)*

Along Imagination's rainbow way
The seven colours
Their peacock feathers have spread.
At the altar of Love
Passion and Thought are wed.

Silver-maned clouds gently draw
The chariot blue
Carrying the starry bride's maids.
From the nebulous palanquin
Descend the angelic guests.

Multi-coloured banners flutter
On the steepled skies.
Joy, the high-priest, chants
In the choric winds
Beauty has come home to Truth.

Soft, falling dew-drops shower
Ceremonial blessings.
The Sun's invisible fingers hold
The Crescent's sacred lace
To the bride's pale blue neck.

The evening's vital flowers are red
Trembling with Heart's desire;
Reason's lightning plucks them to offer
At the altar of Love
When Passion and Thought are wed.

*Tr. T. R. Rajashekharaiah*

# ಮೋಡ

ಕಾವ್ಯಾನಂದ (ಸಿದ್ದಯ್ಯ ಪುರಾಣಿಕ)

ಹುಬ್ಬು ಹಾರಿಸುತಿಹುದು ಮಿಂಚಿನಲಿ ಮೋಡ—
ಶೃಂಗಾರ ಚೇಷ್ಟೆಯಿದು ಯಾರ ಕೂಡ?
ಬಿಳುಪಾಯ್ತು, ಕಪ್ಪಾಯ್ತು, ಕೆಂಪಾಯ್ತು ಮೋಡ!
ಕ್ಷಣಕೊಂದು ರೂಪಾಯ್ತು—ಯಾರ ಕೈವಾಡ?

ಮುಳುಗುತಿವೆ, ಮೂಡುತಿವೆ, ಓಡುತಿವೆ ಮೋಡ!
ಸೇರಲಿಕೆ ಹೊರಟಿಹವು ಯಾವ ನಾಡ?
ಗುಡುಗುತಿದೆ, ಗದರುತಿದೆ, ಕಂಪಿಸುತ ಮೋಡ—
ಈ ಸಿಂಹ ಕೆರಳಿಸಿದನಾವ ಬೇಡ?

ಬಯಲ ಕಡಲಿನ ಹಡಗೊ ಮೀನವೋ ಮೋಡ?
ಕಟ್ಟಿಹವೊ ತಾರೆಗಳು ಗೊಂಬೆಯಾಟಕೆ ಗೂಡ?
ಶಶಿ ತಾರೆಯರ ಕಣ್ಣುಮುಚ್ಚಾಲೆ ನೋಡ—
ಆಗಿಹುದು ಅಡಗಲಿಕೆ ಕರುಮಾಡ ಮೋಡ!

ಕರಗಿತ್ತದೊ, ಕರಗಿತ್ತದೊ, ಸುರಿಯುತಿದೆ ಮೋಡ!
ಕಂಡು ಕನಿಕರ ಬಂತೆ ಈ ಜಗದ ಪಾಡ?

## CLOUDS

*Kāvyānanda (Siddayya Puranik)*

Winking their eyes in lightning mischief
　　They flash their signals of love.
White and pale and dark and red
　　What blossoms are these that glow!

They sink or rise or roll or run
　　Coursing a journey unknown.
And now they groan and growl and thunder
　　What hunter did tease this lion!

A conquering fleet or a heavenly tourney
　　The tents that stars have built;
Or a veil to hide from the eyes of men
　　The moon's blue bridal quilt!

Or honey-pots in which the fairy lovers
Gather the nectar of the twinkling flowers.

*Tr. T. R. Rajashekharaiah*

# ರೋಜ ಬೌಲ ಪರೇಡ್

ಆರ್. ಸಿ. ಹಿರೇಮಠ

ಸಹಸ್ರ ಕುಸುಮ ಸಾಗರ
ಸಹಸ್ರ ತೇರಿನಾಗರ
ಸಹಸ್ರ ಶೀರ್ಷ ತೆರೆತೆರೆ
ಸಹಸ್ರಾಕ್ಷಿ ನೂರೆನೂರೆ
ಸಾಗುತಿಹುದು ತೇಲುತಿಹುದು
ಸಹಸ್ರ ಪುರುಷ ಸಾಗರ
ಚೆಲುವಿನೊಲವಿನಾಗರ !
ಮಾಗಿ ಮಾಗಿ
ಬಂದಿತೋ
ವನವಿರಾಗ
ತಂದಿತೋ
ಅಪರ ಜನ್ಮ
ಮೇಲೆಯೋ
ಮಧುಮಾಸದ
ಲೀಲೆಯೋ !
ಗಿಡ ಗಿಡಗಳು
ಮಡು ಮಡುಗಳು
ಕುಲು ಕುಲು ಕುಲು ನಗುತಿವೆ.
ಎಂಟೆಸಳಿನ ಕಮಲದಲಕೆ
ಎಂಟು ತಲೆಗಳರಳಿವೆ.
ಕಮಲಗಳೂ ತಲೆಗಳೂ
ಹೂವಿನಲ್ಲಿ ಹೊರಳಿವೆ;
ಮರಳಿ ಮರಳಿ ಬರುತಿವೆ:
ಹೊಸ ನಗೆಯನೆ ತರುತಿವೆ:
ನಲ್ಗೀತೆಯ ಬರೆಯುತಿವೆ !
ಭಾರತ ಸಂಕಲ್ಪ
ಗ್ರೀಸದ ನವಶಿಲ್ಪ

## THE ROSE-BOWL PARADE

*R. C. Hiremath*

A very sea of thousand flowers,
A congregation of thousand decorative Cars,
A tumult of thousand waves,
A foaming of thousand eyes,
On it moves, afloat—
A sea of thousand men,
A sight of splendour and beauty!
Autumn has come, marching,
A leafless land
But close on its heels arrives playful spring!
Trees on trees,
Whirlpools within whirlpools,
Laugh loud and brash.
The eight lotus petals
Signalled by eight blossoming heads;
Lotus and heads
All in flower-shape.
They return frequently,
Bring new laughter,
Penning love lyrics!
The inner urge of India,
The new sculpture of Greece,
The rise of faiths,
The battle for scientific truth,
All reflected in the flowers;
Blossoming into flowers,
Which proclaim the sign of progress!
No machines, no techniques,
But a magical spell
Under which they march in unison, life and flower
As one united feeling.
As they parade they promulgate:

ಮತ ಮತಗಳ ಪರಾಟ
ವಿಜ್ಞಾನದ ಹೋರಾಟ
ಹೂವಿನಲ್ಲಿ ಮೂಡಿವೆ;
ಜೀವವಾಗಿ ಅರಳಿವೆ;
ಪ್ರಗತಿ ಗೀತೆ ಒರೆದಿವೆ!
ಯಂತ್ರವಿಲ್ಲ, ತಂತ್ರವಿಲ್ಲ;
ಮಂತ್ರ ಹಾಕಿದಂತೆಯೆ
ಮುಂದೆ ಗೀತೆ
ಚೆಲುವಿನೂರತೆ
ಒಂದುಗೂಡಿ ಸಾಗಿವೆ;
ಹೂವು ಜೀವ ಒಂದೆ ಭಾವ-
ವಾಗಿ ಅರಳಿ ನಿಂತಿವೆ!

ಸತ್ಯವೇ ಸೌಂದರ್ಯ
ಸೌಂದರ್ಯವೆ ಸತ್ಯ ನಿತ್ಯ
ಎಂದು ಸಾರ ಹೊರಟಿವೆ!

ಕನಸಿದೇನೋ
ನನಸಿದೇನೋ
ಕಣ್ಣುಕಟ್ಟು ಏನಿದು?
ಮನಸು ನೆಯ್ದ ಗಾನವೋ?

ಜಗವು ಹೂವೆ ಆಗಲೆಂದು
ಸೊಗವೆ ನಿತ್ಯ ಬಾಳಲೆಂದು

ಗೀತೆಯಾಗಿ ಬಂದಿತೋ
ಜ್ಯೋತಿರ್ಲಿಂಗ ತಂದಿತೋ!

"Truth is beauty
And beauty truth eternal!"
Is this a dream?
Reality?
A trick of the eye?
A song woven by the mind?
To turn the world into a flower,
To offer beauty a permanence,
This parade has appeared,
A song
Enshrining Shiva's shining phallic symbol!

*Tr. K. Raghavendra Rao*

# ದೋಣಿಯ ಹಾಡು

ಸು. ರಂ. ಎಕ್ಕುಂಡಿ

1

ಓ ಬೇಲೀಸೊ ಓ ಬೇಲೀಸೊ !
ಓ ಮಾಲೀಸೊ ಓ ಮಾಲಿ ಲೇಸೊ !
ನೀರಾಟವಾಡಿವೆ ಬಣ್ಣದ ಮೀನ
ಉಪಚರ ಪಸುಪಿನ ಜಲಸಂತಾನ.
ಮುಗಿಲಾಟವಾಡಿವೆ ಬಣ್ಣದ ಹಕ್ಕಿ
ಗಾಳಿಯು ಬೀಸಿದೆ ಬೆಳ್ಳಿಯು ರೆಕ್ಕಿ.

2

ಮುಟ್ಟಾಟವಾಡಿವೆ ಬಣ್ಣದ ಮೋಡ.
ಮೀನು ಮಾತಾಡಿವೆ ಮೀನಿನ ಕೂಡ.
ಹಾಡಿ ಹಾರಾಡಿವೆ ಜೋಡು ಬೆಳ್ಳಕ್ಕಿ.
ಹರಸಲಿ ಮುಗಿಲಿನರುಂಧತಿ ಚಿಕ್ಕಿ.

3

ಚಿನ್ನಾಟವಾಡಿವೆ ಹಂಸವೆಲ್ಲೆಲ್ಲ
ತೆರೆ ನೊರೆ ಮೂಡಿಸಿ ಕಾಮನಬಿಲ್ಲು.
ಕಣ್ಮುಚ್ಚಾಡುವ ಕಮಲವ ಕಂಡು
ಮಕರಂದ ಕುಡಿದಿವೆ ದುಂಬಿಯು ಹಿಂಡು.

4

ಸ್ವಾತಿಯು ಹನಿ ಮುತ್ತು ಹವಳವ ಕಂಡು
ಕಮಲದೊಳರಿಷಿಣ ಕುಂಕುಮ ಕೊಂಡು
ಮೀನುಗಳೆತ್ತಿವೆ ದೋಣಿ ಪಲ್ಲಕ್ಕಿ
ಗಾಳಿಯು ಬೀಸಿದೆ ಬೆಳ್ಳಿಯು ರೆಕ್ಕಿ.

## BOAT-SONG

*S. R. Ekkundi*

Oh beliso, oh belileso!
Oh maliso, oh malileso!
The coloured fish play water-frolics,
The water-children of king *Vasu*,
The coloured birds play sky-frolics
And the wind flaps its silver wing.

The clouds play hide and seek,
The fish whisper with fish,
A pair of silver-birds singing soar,
And let *Arundhati* bless them,

Swans play all over,
Producing the rainbow-shot froth,
The lotus play hide and seek,
And bees cluster round them.

The rain-drops of *Swāti* become pearls and red stones,
Carrying vermillion and turmeric in lotus-cups,
The fish shoulder the boat-palanquins
The wind flaps its silver wing!

The *Chakravāka* stand in the river
Water finds in each drop a magical world;
Fanning hills with clouds,
Wind comes swimming the Ganges!

All the lotus have the lighted plate,
And water fairies chant water–music,
The fish shoulder the boat palanquin
And the wind flaps its silver wing

5

ನದಿಯಲ್ಲಿ ನಿಂತಿರುವೀ ಚಕ್ರವಾಕ
ಹನಿಯಲ್ಲಿ ಕಂಡಿದೆ ಜಲಯಕ್ಷ ಲೋಕ.
ಮೋಡದ ಚವರಿಯು ಬೆಟ್ಟಕೆ ಬೀಸಿ
ಗಾಳಿಯು ಬರುತಿದೆ ಗಂಗೆಯೊಳೀಸಿ

6

ಜಲಜಗಳಾರತಿಯೆತ್ತಲು ಕೂಡಿ
ಜಲಗಂಧರ್ವರು ಜಲಗೀತ ಹಾಡಿ
ಮೀನುಗಳೆತ್ತಿವೆ ದೋಣಿ ಪಲ್ಲಕ್ಕಿ
ಗಾಳಿಯು ಬೀಸಿದೆ ಬೆಳ್ಳಿಯ ರೆಕ್ಕಿ.

7

ಸಂತಾನ ಸಂಭ್ರಮದಾನಂದವುಕ್ಕಿ
ಹಾಡಿ ಹಾರಾಡಿವೆ ಜೋಡು ಬೆಳ್ಳಕ್ಕಿ
ಹುಟ್ಟನು ಬಲ್ಲೆವು ಕಾಪಾಡು ತಾಯಿ.
ತೊಟ್ಟಿಲ ತೂಗಾಡಿ ಬಾ ಗಂಗಾಮಾಯಿ.

Overflowing with joy and pride in future progeny
A pair of silver birds singing soar.
We know how to be born, but, mother River, protect us,
Swinging over cradle, mother Ganges, come!

*Tr. K. Raghavendra Rao*

## ಚಿಂತೆ

ವಿ. ಜಿ. ಭಟ್ಟ

ಬಾಧಿಸಿತು
ನಾಳೆ ನಾಡದು ಆಚೆ ನಾಡದಿನ ಚಿಂತೆ
ಇಂದಿನದು ಇದ್ದೆ ಇದೆ
ಹೇಗಾದರೂ ಇದರ ಪಾರಗಾಣುವೆನಂತೆ
ನಾಲ್ವತ್ತು ವರ್ಷಗಳ ಬೆಂಕಿಯಲಿ ಹಾಯ್ದು ಬಂದೆ
ಸತ್ತಿಲ್ಲ
ಸುಟ್ಟಿಲ್ಲ. ಸೊಲ್ಪ ಬೆಂದೆ.

ಅಂದಿನಾ ಚಿಂತೆಗಳು ನೆನಪಿಗೂ ಬಾರದಿವೆ
ಬಂದರೂ ಒಂದು ಬಗೆ ಹಾಳು ಹಿಗ್ಗು
ಇಂದಿನದು ಇದ್ದೆ ಇದೆ
ನಿದ್ದೆಯಲಿ ಕರಗುವದು
ಹೊದ್ದು ಮಲಗಿದ ಮೇಲೆ ಹರಕು ರಗ್ಗು !

ಎಂಥ ವಿಷ ಲತೆ ಚಿಂತೆ !
ಸರಸರಾ ಹಬ್ಬುತಿದೆ
ಕಾಲನಾ ಕಾಲಿಗೇ ಸುತ್ತು ಬಿದ್ದು
ಪ್ರತಿ ನಾಳೆ ಅರಳುತಿದೆ ನನ್ನ ಮೂಗಿನ ಮುಂದೆ
ಅದರ ಮೊಗ್ಗು
ಬೇರೆಲ್ಲಿ? ಬೇರೆಲ್ಲಿ? ಬೇರೆಲ್ಲಿದೆ?
ಇದರ ಬೇರೆಲ್ಲಿದೆ?

ಅಬ್ಬ ! ಈ ಕೋಶವೇ ಇದರ ಗೊಬ್ಬರ ಕುಳಿಯೆ?
ಈ ತನಕ ಪತ್ತೆಲ್ಲ ಇದರ ಸುಳಿಯೇ
ಹೊರ ಜಗತ್ತಿನ ವಿಷಯ ನೂರೆಂಟು ತಿಳಿದರೂ
ನನ್ನೊಳಗಿನದು ಮಾತ್ರ ಏನೂ ತಿಳಿಯೆ.

## WORRY

*V. G. Bhat*

The worry of tomorrow. of the day after and the day after that,
Nagged me—
Today's worry is there, of course—
Hoping to escape its fold
I went through the fire of forty years—
I didn't die,
Didn't burn out, though got myself slightly cooked.
The worries of those days cannot even be recalled—
And if recalled, give me a mad glee.
Today's worry is there, of course,
And will dissolve in the dream
As I sleep wrapped up in a torn blanket!
What a poisonous creeper is worry!
It quickly climbs,
Coiling round the very legs of time—
Right beneath my nose blossoms every tomorrow,
But where is its bud, root? the root? where is the root?
Its root?
Gosh! is this treasure its pit of manure?
Till now its path eludes me—
I know a hundred and eight things about the world outside me—
But of what lies within me I am absolutely ignorant.

*Tr. K. Raghavendra Rao*

# ಮೂರ್ತಿ

ವಿ. ಜಿ. ಭಟ್ಟ

ಈ ಗಾಳಿಯು ಬೆನ್ನ ಮೇಲೆ
ಮೂರ್ತಿಯೊಂದ ಕೆತ್ತಬೇಕು

ಅದಕೆ ಎಲ್ಲ ಸಾಧನ
ಈ ದೇಹಾ ಈ ವಿದ್ಯಾ
ಜನನ ಮರಣ ವೇದನಾ.

ಅಲ್ಲವೊ ಇದು ಮಿದುಮೇಣ
ವೊಂಡಾಗುವದೀ ಚಾಣ
ನೀರ ಮೇಲೆ ಮಣ್ಣ ಮೇಲೆ
ಮತ್ತೆ ಮತ್ತೆ ಮಸೆಯಬೇಕು.

ಕಾಲವು ಸರಿಯುವದು
ಚಾಣವು ಮುರಿಯುವದು
ಎಸೆಯಬೇಕು
ಬೇರೆ ಜನ್ಮವೆತ್ತಬೇಕು
ಮೂರ್ತಿಯೊಂದ ಕೆತ್ತಬೇಕು
ಈ ಗಾಳಿಯು ಬೆನ್ನಮೇಲೆ—

## THE IMAGE

*V. G. Bhat*

On the back of this wind,
An image must be carved—
All else is preparation for it,
This flesh, this learning,
Birth, death and suffering.

This is no soft wax
And the chisel may blunt—
It must be whetted often
Against water and dust.

Time slips away—
The chisel breaks
And must be thrown away—

Another birth should be taken
For the image must be carved.

For whom? Why? Exactly what image?
Ask not.
On the back of this wind........

*Tr. K. Raghavendra Rao*

# ನ್ಯೂಯಾರ್ಕ್

ಗಂಗಾಧರ ಚಿತ್ತಾಲ

ತೊಟ್ಟಿಕ್ಕಿತಿಲ್ಲೊಮ್ಮೆ
ನನ್ನ ಬಯಕೆಯ ರೇತದಣು
ಜಳಕ್ಕನೆ ಜಗುಳಿ.

ಆ ಅಭಾವಿತ ಬೀಜರೋಪಣವೆ
ಚಿಗಿತೆದ್ದು
ನೆಗೆದು ಮುಗಿಲಿಗೆ ಆಡರಿ ಆಡ್ಡೈಸಿ ಮೆರೆದಿಹುದು
ಸಹಸ್ರಶೀರ್ಷಗಳ ಶತಸಹಸ್ರಾಕ್ಷಗಳ ರಾಕ್ಷಸೋದ್ಧತ ದರ್ಪ.

ನಾನೆ ಕಟ್ಟಿದೆನೆ ಇದ?
ಕೈಕೊಸರಿಕೊಂಡೆದ್ದು
ತನ್ನ ತಾನೇ ಕಟ್ಟಿಕೊಂಡಿತೇ ವ್ಯೂಹಿಸಿದ
ಈ ಕಾರ್ತವೀರ್ಯ ಕೃತಿ?

ಧರೆಯ ಹಿಂದೆಳೆತ ಲೆಕ್ಕಿಸದೆ ಭುಜಬಲವುಬ್ಬಿ
ಭೂಗರ್ಭದಿಂದ ಎಬ್ಬಿಸಿದೆ ಪರ್ವತಭಾರ.

ಗರ್ವಿತ ಅಹಂಭಾವದಲಿ ಎತ್ತಿ ಒಟ್ಟೊಟ್ಟ
ಸ್ತಂಭಿಸಿದೆ ಲೋಹಪಾಷಾಣದೀ ಶಿಖರಗಳ

ನೆರೆದು ವಿಜೃಂಭಿಸಿದೆ ಗಿರಗಹ್ವರಪ್ರಾಯದೀ
ಕಳೇವರದ ಅವಯವದ ಸಮುದಾಯದಲಿ
ಸಂಭ್ರಮದ ಸಂಸಾರ.

ಹುಟ್ಟು ಕೊಟ್ಟವನನ್ನೆ ಎದೆಮೆಟ್ಟುತಿದೆ ಇಂದು
ಈ ಬೃಹದ್ಭೂಭಾರ : ಅಡಿಗಲೆವ ಲಘು ನಾನು.

ನಾಸಿತ್ತ ನಾಡಿಗತಿಯಲಿ ನನ್ನ ತೇಲಿಸಿದೆ
ಇದರ ರುಧಿರಾಭಿಸರಣದಿ ರಕ್ತದಣು ನಾನು.

ಜಠರದೊಳು ತಬ್ಬಿ ಮೂರ್ಛರನಾಗಿ ಬಿದ್ದಿತಿದೆ
ಗರ್ಭವಾಸಕೆ ಮರಳಿ ಸಿಕ್ಕೊಡಲ ಮಗು ನಾನು.

## NEW YORK

*Gangādhar Chittāl*

The semen of my desire,
Dripping,
Slipped down suddenly a drop here.

This accidental sowing of seed,
Sprouted, shot up to reach
The sky, covering it in glory,
This display of the arrogance
Of a demon's thousand heads and million eyes

Did I build it?
Or did it cut off from me
To construct its own fertilisation,
This work of *Kartikeya?*
Defeating gravity by its strong bulging shoulders,
This mountainous weight has come up from earth's depths.

These steel and stone peaks
Have established themselves, crowding in pride and conceit

This family flourishes,
Amidst a collection of limbs of a corps,
Displaying the crowded splendour of hills and caves!

Now this heavy burden on earth,
Presses down the chest of its creator,
And I, weightless, roam at its feet!

It has floated me in the flow of nerves I created,
But I am a drop in its circulating blood!
Like the belly it envelops, oppressing hard,
And I am a child forced back into original womb.

*Tr. K. Raghavendra Rao*

# ಏಳು ಸುತ್ತಿನ ಕೋಟೆ

ಬಿ. ಸಿ. ರಾಮಚಂದ್ರ ಶರ್ಮ

1

ಏಳು ಸುತ್ತಿನ ಕೋಟೆ.
ಸರ್ಪಕಾವಲು ಅದಕೆ ಹೊರಗೆ ಒಳಗೆ;
ನಡುವಿನರಮನೆ ಕೆಳಗೆ
ನೆಲಮಾಳಿಗೆ !

ಅಲ್ಲಿ ರೋದಿಸುತಿಹಳು ಚೆಲುವೆ ರಾಜಕುಮಾರಿ.
ಮಾನಸಂರಕ್ಷಣೆಗೆ ಇರುವದೊಂದೇ ದಾರಿ,
ಹೊಳೆ ಬೆಂಕಿ ವಿಷ ಚೂರಿ !
ಅರೆಗಳಿಗೆಯಂತರವೆ ಬದುಕು ಬಯಲಿನ ಸೆಡುವೆ?
ಏಳು ಸುತ್ತನು ದಾಟಿ
ನೂರು ಭಟರನು ತರಿದು
ಕತ್ತಿ ಹಿರಿದು
ನುಗ್ಗಿ ಬಾರನೆ ರಾಜಕುವರ ನಲ್ಲೆಯ ಬಳಿಗೆ?
ಅದೊ ಹೆಜ್ಜೆ ಸಪ್ಪುಳ ! ಕಣ್ಣ ನಂಬಲೆ ತಂದೆ?
ಯಾರಿವನು ಕಣ್ಮುಂದೆ !
ಹಗಲಿರುಳ ಸವಿಗನಸು ಇಳೆಗಿಳಿದು ಬಂತೆ?
'ಮನದನ್ನೆ, ಇದೊ ಬಂದೆ.
ಖಳನಾಯಕನ ಕೊಂದೆ
ನಿನಗೆಂದೆ !'
ಮುಗುಳ ಮರೆಯಿತು ಮೊಗವು; ಕುಶಲ ಕೇಳಿತು ಕಣ್ಣು :
ನಂಜ ನುಂಗಿತು ನೆಲವು
ನೂರು ವರುಷದವರೆಗೆ ಸುಖವಾಗಿ ಬಾಳಿದವು ಒಲವು ಚೆಲುವು !
ಅಜ್ಜಿಕತೆ ಜೊತೆಜೊತೆಗು ಬುಗುರಿ ಚಿಣ್ಣೀದಾಂಡು
ಕವಡೆ ಗಾಜಿನ ಗೋಲಿ ಕಲ್ಲಾಂಟೆ ಚೆಂಡು.
ಇಂಥ ಲೋಕಕ್ಕೊಂದು
ಮುಗು ಬಂತು. ಬಂತು !

# THE SEVEN-FOLDED FORT

*B. C. Ramachandra Sharma*

**I**

A seven-folded fort.
Within and without serpent-guarded!
Right beneath the centre palace
Steps descend to a secret cellar!
There weeps a lovely princess.
There is but one way to defend her honour—
The stream, flame, poison or the knife!
Should life and death be as thinly divided by a mere half an hour?
Wouldn't the prince rush to his beloved,
Crossing the seven folds,
Brushing aside a hundred soldiers
And brandishing his sword?
Hark! the sound of steps! father, should I trust my eyes?
Who is he before my eyes?
Did the sweet dream of days and nights come down to earth?
'Darling, here I come.
I have finished off the villain,
And for your sake!'
The face shone with smile; the eyes solicited welfare;
The land swallowed poison
And for a century lived in happiness Love and Beauty!
Mixed with granny's tale are the games of top, sticks,
The bolas, marbles, stone and ball.
Into this universe
Came, came a child!

**II**

Should I say, it came?
Did the drum announce the Master's arrival?
Did the pilot car pass by?
Did you see the sky's cotton pieces whirl against the blue?

## 2

ಬಂತೆನಲಿ?
ದೊರೆ ಬರವ ನುಡಿಯಿತೇನು ನಗಾರಿ?
ಮಾರ್ಗದರ್ಶಕ ಕಾರು ಹೋಯಿತೇನು?
ನೀಲಿಮೆಗೆ ಮುಗಿಲರಳೆ ಉರುಳಿದುದ ಕಂಡೆಯ?
ಸುಮಕೆ ಸೌರಭ ಬಂದ ಘಳಿಗೆ ಯಾವುದು ಹೇಳು.
ಬಂತೆ ಮಗು?
ಅಥವ ಮನೆಯೊಳಗಿತ್ತೊ!
ಅಜ್ಞಾತದಾಳದೊಳು ತಲೆ ಮರೆಸಿ ಕುಳಿತೊಂದು ನೆನಹಂತೆ
ಆಗ ಅದು ಹೊರಬಿತ್ತೊ!
ಮಗು ಬಂದ ಮೇಲೆನಗೆ ಮಗುಬರೆವಿನರಿವು.
ಮುದ್ದು ಮುಖ; ಬಿಗಿಹಿಡಿದ ಕೈ; ಚೆಲುವು ಮೈ;
ದೈನ್ಯ ಕಣ್ಣೊಳಗಿತ್ತು.
'ಬಂದೆ ನಿನ್ನನೆ ನಂಬಿ.
ಇರಲು ಎಡೆಗೊಡು ಸಾಕು; ತಿನಲು ಏನೂ ಬೇಡ'.

## 3

ಮಗುವಿನೊಡನಾಟ ಹಿತವೆನಿಸೆ ಮನಕೆ
ದಿನ ದಿನಕೆ
ಸವೆದ ತಿಂಗಳು ಹೊಸತು ತಿಂಗಳಿಗೆ
ವರುಷ ಹೊಸ ವರುಷಕ್ಕೆ
ಎಡೆಗೊಟ್ಟುದೇ ಕಾಣದಾಯ್ತೆನ್ನ ಕಂಗಳಿಗೆ!
ಅಂತರವಿರದಾಯ್ತು ಎದೆಯುಂಡ ಹರುಷಕ್ಕೆ
ನನಗೆ ಹದಿನೆಂಟು ತುಂಬಿದ ದಿನಕೆ ಮಗುವಿಗೂ ಹದಿನೆಂಟು.
ಘಳಿಗೆ ಘಳಿಗೆಗು ಬೆಳೆಯಿತೆಮ್ಮ ನೇಹದ ನಂಟು.
ಕಂಗಳುಟ್ಟವು ಗೆಳೆಯ ನೀಡಿದ ಗಾಜು.
ತೆರೆ ತಳೆದ ಸಿರಿ ಚೆಲುವ ನೋಡುವುದೆ ಬಲು ಮೋಜು!
ದುಂಬಿ ಅರವಿಂದದೊಳು ಲೀನವಾಗುವ ಮುನ್ನ
ನನ್ನೆಡೆಗೆ ಮೊಗ ತಿರುಗಿ ಕಣ್ಣ ಹೊಡೆಯಿತು ಒಮ್ಮೆ
ಮಾಮರವ ಸೆರೆಹಿಡಿದ ಬಳ್ಳಿ ಮೈ ಕುಣಿಕುಣಿಸಿ
ಹೂವು ನಗೆಯೆಸೆದು ಕೇಳಿತು ನನ್ನ. (ಅದಕೆಂಥ ಹೆಮ್ಮೆ!)
ತುಂಬಿದೆದೆ ಮಲೆ ಮೇಲೆ
ಸಂಜೆ ಸೂರ್ಯನ ಹೊನ್ನ ಬೆರಳ ಲೀಲೆ!

Tell me when precisely fragrance arrived to the flower.
Did the child come?
Or was it after all at home!
Did it then emerge like a memory
From deep hiding, concealing itself!
The awareness of the child's arrival arrives only after it arrives.
Sweet face; lovely body; entreating eyes.
'I have come depending on you.
All I ask is room enough to stay; nothing to ear.'

**III**

Finding it pleasant to play with the child,
I hardly noticed how year to year,
Month to month, and day to day,
Spent themselves!
There was no gap in the joy that filled the heart.
The day I was eighteen was also the day the child turned eighteen.
The bonds of our friendship grew from moment to moment.
The days donned the glasses the friend gave.
It's sheet joy to watch the wealth of loveliness the earth wears!
Before disappearing into the flower,
The bee turned its face to me and winked once.
The creeper that had imprisoned the mango tree
Dancing its body, scattered its smile flowers to provoke me.
(How proud it was!)
Over the full-grown breasts,
The golden fingers of the evening sun play!
Below lies unrolled a bed of grass;
Above the soft blanket of moonlight—
From the shade,
The beauty of a woman's bemused voice bursting into laughter!
A seven-folded fort.
Within a princess.
The only way to defend her honour is,
The stream, fire, poison or knife!
Can't you hear the lament? move on!
I am the prince: here I come,
Darling!
No longer need you worry about losing your life.

ಹುಲ್ಲು ಹಾಸಿದೆ ಕೆಳಗೆ;
ಮೇಲೆ ಬೆಳುದಿಂಗಳಿನ ಮಿದು ಹೊದಿಕೆ—
ಮರೆಯಿಂದ
ಹೆಣ್ಣ ದನಿ ಮೋದದೊಳು ನಕ್ಕ ಕಿಲಕಿಲ ಚೆಂದ!
ಏಳು ಸುತ್ತಿನ ಕೋಟೆ.
ಒಳಗೆ ರಾಜಕುಮಾರಿ.
ಮಾನಸಂರಕ್ಷಣೆಗೆ ಇರುವದೊಂದೇ ದಾರಿ,
ಹೊಳೆ ಬೆಂಕಿ ವಿಷ ಚೂರಿ!
ಕೇಳದೇ ಆಕ್ರಂದ? ನಡೆ ಮುಂದೆ!
ನಾನೆ ರಾಜಕುಮಾರ: ಇದೊ ಬಂದೆ
ಮನದನ್ನೆ!
ಅಸುವ ನೀಗುವ ಚಿಂತೆಯೇಕಿನ್ನು ಕಾಂತೆ?

4

ಮಗುವಾಗಿ ಬಂದವನು ಮುಗಿಲುದ್ದ ನಿಂತ!
ನಾನೆ ಮಗುವಾದೆ, ಚೋಟುದ್ದವಾದೆ.
ಅವನು ಬಡಿದನು ತಾಳ; ನಾ ಕುಣಿದೆ ಬೇತಾಳ
ಜಗದಗಲ ನಿಂತವನು ನೂರು ರೂಪವ ತಾಳಿ ಎಡೆಬಿಡದೆ ಕಾಡಿದ.
ಮೈಯೊಳಗೆ ಮನೆ ಮಾಡಿ ಬಯಕೆ ಬಾಧೆಯು ಒಂದೆ ಏನುಮಾತೆ
ಮಾಡಿದ!

ನಾನಾದೆ ಮುಳ್ಳುಗಿಡ.
ಅಗ್ನಿಪರ್ವತದೊಳಗೆ ಬಯಕೆ ಲಾವವು ಬಂದಿ.
ಮೈಯೊಳಗೆ ಸೆರೆಯಾದ ಹುಚ್ಚು ಹೊಳೆಗೆ
ರವಿಯಿರಪನರಿಯುದಿಹ ಕಡಲ ಕೂಡುವ ಬಯಕೆ!
ಜೋಡಿ ಬೆಟ್ಟವನೇರಿ
ಕಣಿವೆಯಾಳದಿ ಸುಳಿದು
ಬಯಲುದ್ದ ಹರಿದು
ಭೂಮಧ್ಯರೇಖೆಯೆಡಬಲಕಿರುವ ಕಗ್ಗಾಡನುಳಿದು
ಕಡಲ ಮಡಿಲೊಳು ಇರವ ಮರೆವ ಬಯಕೆ!

5

ನಾನೊಂದು ಮುದಿಗೊಡ್ಡು.
ಇದ್ದರೂ ಇರಬಹುದು ಅರಳುಮರಳು.

V

Who came as a child stood as tall as the sky!
I became child, no taller than a finger.
He beat the rhythm; I, the ghost, danced!
Wide as cosmos, taking hundred forms, he pestered me.
Taking residence in my body, he made me feel desire and pain
as one!

I became a thorny tree.
The lava of desires lies prisoner in the volcanoes.
The mad river imprisoned in the body
Yearns to join the sea that knows not of sun's existence!
Climbing the twin hills,
Descending the depths of the valley,
Flooding all space,
Inundating the forests to the left and right of the equator,
This river yearns to make home on the sea's lap!

V

I am an old fogey.
May be hopelessly mixed up about everything!
Who came as a child and became an equal
First came the way he came an aeon ago—didn't he?
Shadows merge into shadows to become night.
The heart daydreams of the memory of neem-fruit and jaggery
And a memory that recalls to the eyes a row of breasts;
Even if you bury the details, it is handy,
Clear.
'Grandpa, it's boring. Let's have a really good tale.
'Listen, child:
A seven-folded fort.
Within and without serpent-guarded!'

*Tr. K. Raghavendra Rao*

ಮಗುವಾಗಿ ಬಂದವನು ಜೊತೆಯಾಗಿ ನಿಂತವನು
ಬಂದ ದಾರಿಯ ತುಳಿದು ಯುಗವಾಯಿತಲ್ಲವೆ?
ನೆರಳು ನೆರಳಾಗಿರುವಳು.
ಎದೆಯು ಕನವರಿಸುತ್ತಿದೆ ಬೇವು ಬೆಲ್ಲದ ನೆನಪು.
ನೆನಹಂತೆ ಕಣ್ಣೆದಿರು ಮಲೆಯ ಸಾಲು;
ವಿವರಗಳ ಬೈತ್ತಿಟ್ಟರೂ ಮಾಟ
ಸುಸ್ಪಷ್ಟ.
'ತಾತ, ಬೇಸರ ನನಗೆ. ಒಳ್ಳೆ ಕತೆ ಹೇಳು'.
'ಮಗು, ಕೇಳು:
ಏಳು ಸುತ್ತಿನ ಕೋಟೆ.
ಸರ್ಪಕಾವಲು ಅದಕೆ ಹೊರಗೆ ಒಳಗೆ!'

# ಕೆಂಡ — ಕಡಲು

ಬಿ. ಸಿ. ರಾಮಚಂದ್ರ ಶರ್ಮ

1

ತಿರುಗು ಕೆಂಡದ ಹೊದಿಕೆ ಕಳಚಿ ಕಲ್ಲಾದ ದಿನ ಮೊದಲಾದ
ನಾಟಕವೆ ಇಲ್ಲಿ ನಡೆದಿದೆ ಈಗ—
ಅದೆ ಜೋಡಿ, ಅದೆ ಮೋಡಿ, ಅದೆ ರಂಗ ರಾಗ!
ಹಳತು, ಬಲು ಹಳತು ಈ ಕೆಂಡ ಕಡಲಿನ ಆಟ.
ಎದುರು ಹಾಸಿದೆ ಚೆಲುವು—ಕಣ್ಣ ಕೆಣಕುವ ಕಡಲ ಒಡಲ ಬತ್ತಲು
ಮಾಟ . . . .
ನೀಲಿಯಂಚಿನ ಮಳಲ ಬೆಳ್ಳಿ ಗೆರೆಯೊಳು ನಿಂತೆ
ಮೊದಲ ಮಾನವ ನಾನು ಕೆನ್ಯೂಟನಂತೆ.

2

ಅದೊ ಬಂತು—ಬಂತು ಓಕುಳಿ ಗಳಿಗೆ
ಸಂಜೆ ಸೂರ್ಯನ ಬಿಂಬ ನೀರ ಕನ್ನಡಿಯೊಳಗೆ
ಬೆಳೆದ ಎದೆಗುದಿ ಬಯಕೆಯೊಕ್ಕಣಿಕೆ ಈ ನೀರಿನಲೆ ಬಲೆಯ ಹೆಣಿತ
ನೂರು ಸಾವಿರ ಕಣ್ಗಳಂಚು ಮಿನುಗಿದ ಕಾಮ—ಮೀನ ಕುಣಿತ!
ತಡೆಯಲಾರದೆ ಬಾಧೆ
ನಾ ಹಡೆದ ಹೆಣ್ಣಾದೆ—
ಸಿಡಿದೊಡೆದು ಎರಡಾದೆ ಏಕಕೋಶದಮೀಬದಂತೆ!
ನಟರಾಜ ನಾನೆ ಪ್ರೇಕ್ಷಕನಾಗಿ ನಟನೆ ನೋಡುತ ನಿಂತೆ. ನಿಂತೆ . . . .

3

ಓ ಬೇಲೀಸೋ . . . ಓ ಬೇಲೀಸೋ . . .
ಕಡಲಿನ ಕರೆ ಒಲವಿನ ಬಲೆ ಆಲಿಂಗನ ಚುಂಬನ!
ಓ ಬೇಲೀಸೋ . . . ಓ ಬೇಲೀಸೋ . . .
ಮೈ ಬೀಸಿಗೆಗೆದೆ ಹಾಸಿಗೆ ತಂಪು ಬಾಹುಬಂಧನ!
ಓ ಬೇಲೀಸೋ . . . ಓ ಬೇಲೀಸೋ . . .
ಕಡಲಿನ ಕರೆ ಒಲವಿನ ಬಲೆ

## FIRE-SEA

*B. C. Ramachandra Sharma*

1.

Today, before me:
That very play that began the day
When the husk of the turning ember
Froze to stone:
That very couple, that same enchantment,
That very stage, that color!
Old, very old, the play of fire and water.
Beauty spread before the eyes, the sea's inviting nudeness.
On the silver line of the blue-margined sand
I, original man, stood
Like Canute.

2.

There it comes, the crimson moment
The sunset sun's image in the water mirror
Ingrown pains and desire's intrigue weave this ocean's nets
The lustful flesh of a million eyes—these darting fish!
    Impatient of the pain
    I grew into motherhood,
    Split in two like a one celled amoeba!
Split, I stood gazing at the play, where I
Was the Prince of Players.

3.

O beliso, O beliso[1]
The ocean's wall, the nets of love, the hug, the kiss
Coolness of breasts for the body's summer
And a pair of arms
O beliso.... O beliso
The ocean's call, the nets of love...
The seven notes of a single wave ripples aside!

---

1 a folk-refrain

ಸರಿಗಮಪದನಿಸದೊಂದಲಿ ಸರಿಯುತಿಹುದು ಪಕ್ಕಕೆ !
ಓ ಬೇಲೀಸೋ . . . ಓ ಬೇಲೀಸೋ . . .
ಕೆಣಕುತ ಕಣ ಕಣ ಮರಳನು
ಎದೆ ಮೈ ಕೈ ಕಲ್ಬೆರಳನು ಕರೆಯುತಿಹುದು ತೆಕ್ಕೆಗೆ !

4

ಮನಸೋತ ನಾ ಸೂರ್ಯ ಕಡಲ ನೀರಿನ ಮರೆಗೆ ಬಾನಂಚಿಗಿಳಿದೆ.
ಮೊದಲ ಮಾನವ ನಾನು ಹೆಣ್ಣಲೆಯ ನೆರಳಾಗಿ ನೀರಿಗಿಳಿದ.
ತೋಳ ಬೀಸಿದ ಕಡಲು ತಬ್ಬಿ ಹಿಡಿಯಿತು ನನ್ನ
ಆಳುದ್ದದಲೆಯೊಂದು ತಲೆಯ ನೇವರಿಸಿತ್ತು . . .
ಸತ್ತವನ ಗುಣಗಾನ—ಪಡುವಣದ ನುಡಿಹೊನ್ನು—
ಕ್ಷಣಕ್ಷಣಕು ಕರಗುತಿದೆ.
ನೀಲಿಯಂಚಿನ ಮಳಲ ಬೆಳ್ಳಿಹಾಸಿಗೆ ಮೇಲೆ ಗುರುತೊಂದು
ಕರಗುತಿದೆ.
ನೆನೆನೆನೆದು ಮರುಗುತಿದೆ . . .

5

ನೀರಿನೊಡಲಿಗೆ ಒಡಲ ಬೆಸೆದು ಸಾಯುವ ಬಯಕೆ.
ಪಾತಾಳದಾಳವನು ಅಳೆವ ಬಯಕೆ !
ಕಡಲ ಬಸಿರಿನ ನುಣುಪನೊದ್ದೆ ಬೆರಳೊಲು ತಡವಿ
ತಾಯ್ಮಳಲ ನೆಲದಲ್ಲಿ ಥೈಯಿ ಥಕಥಕ ಕುಣಿದು ತಣಿವು ಕಾಣುವ
ಬಯಕೆ ಎದೆಗೆ !
ಮುಳುಗಲೆಳಸಿದೆ ತಳಕೆ
ಪಾತಾಳದಾಳಕ್ಕೆ
ಸತ್ಯರತ್ನದ ನಿತ್ಯ ಖನಿಗೆ. ನೆಲೆಗೆ !
ಅದೊ. ಅಲ್ಲಿ—
ಆಳು ನೀರಿನ ಕೆಳಗೆ. ಮುತ್ತು ಸುತ್ತಿನ ಒಳಗೆ ಹನಿಬೆಳಕು
ವಜ್ರ ವೈಡೂರ್ಯ ಹವಳ !
ಮತ್ತೆ ಮುಳುಗಿದೆ ನಾನು ನೀರ್ಗತ್ತಲಾಳಕ್ಕೆ
ಕಂಡೆ . . .
ನನ್ನ ನಾನೇ ಕಂಡೆ ಎದುರುಗೊಂಡೆ !
ಹಗಲೊಡೆಯ ರವಿಯೊಂದು ಸಣ್ಣ ಬೆಳಕಿನ ಉಂಡೆ
ಏನನೋ ಅರಸುತ್ತ ನಡೆದಿದ್ದ ನನ್ನಂತೆ . . .

**4.**

Lost, I was the sun and climbed down, behind the water, behind
the rim of the sky.
As man and archetype I climbed down into the water was the
womanwave's shadow.
The ocean swept me in its arms' deep embrace,
A man-deep wave tenderly played with my hair....
Like a dead man's praise, like the west's wordgold—
It melts with watching.
On the blue margined silver sand
A sign is fast dissolving
In memory, regret

**5.**

Desire. Desire to weld the body in death
To the ocean's liquid body and to plumb
The depths of the land of shades! To caress
With a wet finger the smooth-walled womb of the sea,
And touching the motherbed, to dance
Dance dance Tthaitthakka tthakka
Till dancing ends desire!

I tried to dive
To the darkest waters—
Perpetual mine of reality's diamonds!
There, there—
A fathom down, in walls of mother of pearl a sprinkle of light,
ruby, coral, amethyst!

I dived again into the liquid darkness
And saw....
Myself!
And saw the daystar sun, now a little ball of light
Walking, in search of something, like me....

**6.**

The sea drew a long long breath
A flicked, heaved, pushed away, the drop

6

ನಿಡಿದುಸಿರನೆಳೆದೊಮ್ಮೆ ಕಡಲು ಹಬ್ಬಿತು ತಿರುಗು—ಬುಗುರಿ
ನೆತ್ತಿಗೆ ಬಿದ್ದ ಹನಿಯು !
ಸಿಂಗರಿಸಲೆಳಸಿದ್ದ ಸೂರ್ಯ ಮೂಡಲ ಮನೆಯು . . .
ನೀಲಿಯಂಚಿನ ಮುಗಿಲ ಬೆಳ್ಳಿ ಗೆರೆಯೊಳು ನಿಂತೆ
ಮೊದಲ ಮಾನವ ನಾನು ಕೆನ್ಯೂಟನಂತೆ !

That fell on the brow of the spinning top!
The sun was in the east....
On the silver line of the blue-margined sand
I stood like primal man, like King Canute!

*Tr. A. K. Ramanujan*

# ಹಾವು ಹೆಡೆ ಬಿಡಿಸಿದಾಗ

ಎಂ. ಅಕಬರ ಅಲಿ

1

ಎಂತೇನೊ ಐತಂದ ಮಾಂತ್ರಿಕ ವಸಂತ
ಬಡಿದು ಡಂ ಡಂ ಡೋಲು
ಬೀಸಿ ಮಾಯದ ಕೋಲು
ಹೂ–ಭಾರ ಸೌರಭಸಾರ ಸೂರೆಗೈದ;
ಇಂದ್ರನಮರಾವತಿಯು ನೆಲಕಿಳಿಸಿದ
ಮಹೇಂದ್ರಜಾಲದ ಆ ಬೃಹತ್ ಸಂಪ್ರಷ್ಟಕೆ
ಕೋಗಿಲೆಯು ಬರೆದಿತ್ತು ಚುಟುಕ ಟೀಕೆ:
"ನೀನೊಲಿದರೆ ಕೊರಡು ಕೊನರುವುದಯ್ಯ !
ನೀನೊಲಿದರೆ ಬರಡು ಹಯನಹುದಯ್ಯ !"

2

ಇಂಬಾಗಿ ಸಿಂಬೆಯು ಸುತ್ತಿ
ಬಿದಿರು ಬುಟ್ಟಿಯುಲಿರುಗಿ ಗೊರಕೆಹೊಡೆಯುತ್ತಿದ್ದ ಹಾವ
ಹೊಡೆದೆಬ್ಬಿಸಿದನೀ ಮಹಾನುಭಾವ.
ಕಮನೀಯ ಕಾಮನಬಿಲ್ಲೆ ಮೈದಾಳಿತೆಂಬೊಲಿಹ
ಆ ಹಾವೊ,
ಮುಗುಳಾಗಿ ಮೇಲೆದ್ದು
ಹೂವಾಗಿ ಹೆಡೆ ಬಿಡಿಸಿ
ಮೋಹಿನಿಯ ಅಪರಾವತಾರವಾಗಿ
ಕೆಣಕುತಿರೆ ಕಣ್ಮನವ.
ತೇಲಿ ಬಂದಿತ್ತೊಂದು
ನಿತ್ಯನಿರಂಜನ ಪ್ರಣವಸ್ವರೂಪಿಯ ಮೃದುಮಧುರ ಚಿವನ ಅಕ್ಷಯ್ಯ:
"ಹುತ್ತವ ಬಡಿದೊಡೆ ಹಾವು ಸಾಯುಬಲ್ಲುದೆ ಅಯ್ಯ?"

3

ಮಿದುಳು ಮದಡಾಗಿತ್ತು.
ಸಂತೆ ನಡೆಯುತ್ತಿತ್ತು.

## WHEN THE SNAKE OPENED ITS HOOD

*M. Akbar Ali*

1.

Somehow spring, the magician, managed to arrive,
Beating his drum loud,
Waving his magic wand
Scattering the scent of perfume-heavy flowers;
Brought to earth the heavenly capital of *Indra*, *Amaravati*.
On that fat volume of mighty magic
The nightingale composed a minor commentary:
"If You will, lord, the log will sprout green shoots!
If you will, lord, the dry cow will flow with milk!"

2.

This great person poked and woke up
The snake coiled like a pot-support
Spreading with ease in the bamboo-basket, snoring.
That snake,
Woke up a bud
Opened its hood a flower,
Incarnation of *Mohini*, the divine enchantress,
Provoking the eyes and the heart,
And floating arrived
Like the deathless soft-sweet words of an eternal, pure, original-shaped one:
"Can you kill the snake by destroying the ant-hill?"

3.

The brain was dull, befogged.
The shandy was in full swing.
The mind ran wrecklessly to Shiva's above.
Alas! alas!
There, too, reigned a snake!—
A snake wound around the neck of great Shiva like a garland
And the head bore the weight of the crown!!

ಮನವು ಕಿತ್ತೋಡಿತ್ತು—ಕೈಲಾಸಕೆ.
ಅಕಟಕಟ !
ಅಲ್ಲಿಯೂ ಸಿಕ್ಕಿತ್ತು ಹಾವಿಗೇ ಪಟ್ಟ !
ಆ ಪರಶಿವನ ಕೊರಳಿಗೇ ಹಾರ !
ತಲೆಗೋ ಕಿರೀಟದ ಭಾರ !
ನಿಲ್ಲಲಾಗದೆ ಅಲ್ಲಿ
ಜಗ್ಗನೆ ಜಾರಿದೆನು ವೈಕುಂಠವಿರುವಲ್ಲಿ.
ಕಣ್ಣು ತೆರೆದುದೆ ತಡ
ಮೈಯೆಲ್ಲ ನಡುಗಿದುದು ಗಡಗಡ:
ಅಲ್ಲಿಯೂ ಹಾವಿನದೇ ಉಗ್ಗಡ !
ಹಾವ ಹಾಸುಗೆ ಮೇಲೆ ಹೊರಳಾಡುತಿದ್ದನ್ನೆ ಶೇಷಶಾಯಿ ! ಬಡಪಾಯಿ !

4

ಶಾಂತಿಸಾಗರದೆದೆಯೊಳಾಗಿರಲು ಅಣುಬಾಂಬಿನಾಸ್ಫೋಟನ !
ಎದ್ದೆದು ಬಿದ್ದೇಳ್ವ ಹೆದ್ದೆರೆಗಳೊಡೆತಕ್ಕೆ ಹೋಳು
ಹೋಳಾಯ್ತು ಹೆಬ್ಬಂಡೆ ಮೇಳ !
ಆದರೂ,
ಭದ್ರವಾಗಿಯೆ ಇತ್ತು ದೀಪಸ್ತಂಭ
ನಡೆಯುತ್ತಲ್ಲಿಗೆ ಅಲ್ಲಿ ಅಭಯಜ್ಯೋತಿಯು ಲೀಲೆ
ಸಾಗರದ ಎದೆಯ ಮೇಲೆ,
ಮೂಡಿಕೊಂಡಿತ್ತೊಂದು ರಮ್ಯಾದ್ಭುತ ಬಿಂಬ:

ಆದಿಶೇಷ ಅರಳಿಸಿದ್ದ
ತನ್ನ ಸಪ್ತ ಫಣಾ,
ಸುತ್ತುತಿದ್ದಿತವರ ಮೇಲೆ
ಸರ್ವವಿಶ್ವ ಕಣಾ

ಅದಕಂಡು ಮನದೆದುರು ತೆರೆದುಕೊಂಡಿತ್ತೊಂದು ನೂತನಪಥ.
ಜೀವ ನನಗೆಂದಿಗೂ ಬಡ ಜೋಗಿ ಕೈಕೊಳ್ಳ ಪಲಾಯನ ವ್ರತ !
ಈ ಕಾಳಿಂಗನ ಕುಣಿದವನ ಹೆಡೆಯ ಕುಟ್ಟಿ
ಕೃಷ್ಣನಾಗಿ ನಿಲ್ಲುವ ಆ ಅವರ ತಲೆಯ ಮೆಟ್ಟಿ !

Unable to stand it there,
I hurried off to Vishnu's abode.
No sooner did I open my eyes
Than my entire body shivered;—
Even there the aggressive presence of a snake!
Lord Vishnu was tossing on a bed of snake!—poor fellow!

4.
The heart of the Pacific ocean exploded with an atom bomb!
The collection of boulders were smashed to smithereens by huge waves!

And yet,
The light-house remained secure, intact.
There goes on the protective light of hope, on sea's bosom;
A wonderful, lovely image was reflected:
The primordial serpent had blossomed
Its seven hoods
While resting on it revolved
The entire cosmos!
Seeing that I before minds eye a new path.
No, I shall never seek the escape of a mendicant—
Subduing the hood of this mighty serpent,
I shall become Krishna standing on its head!

*Tr. K. Raghavendra Rao*

# ಇವನು

ಜಿ. ಎಸ್. ಶಿವರುದ್ರಪ್ಪ

ತಲೆಯು ತಪ್ಪಲೆಯಲ್ಲಿ
ವಿಚಾರಗಳ ಕುದಿತ
ಎದೆಯು ಗೂಡೊಳಗೆನಿತೊ
ಮುರಿದ ಗಡಿಯಾರಗಳ ತುಡಿತ
ಹಗಲು ಇರುಳು.
ಹಾಸುಗಂಬಿಯ ಮೇಲೆ
ನೂರು ರೈಲಿನ ಉರುಳು:
ಇನಿತೆ ಸ್ಪಂದನ: ಮತ್ತೆ
ಮೌನ ಮೌನ!

ಹಗಲೊ ರಾತ್ರಿಯೊ ಏನೊ ಎಲ್ಲವೂ ಇವನ
ಬಾಳ ತಿವಿಯುತ ಮುಂದೆ ಸಾಗಿರುವುವು.
ಬೆಂಕಿ ಬಾಯನು ತೆರೆದು ನಗುವ ಮೂಡಲ ಬಾನು
ನೂರು ತೂತಿನ ಛತ್ರಿ ಬಿಚ್ಚುವಿರುಳಿನ ಬಾನು
ನಿಡುಸುಯ್ಲಿನೊಲು ನಡೆವ ಗಾಳಿಗಳ ಹೊನಲು—
ಎಲ್ಲವೂ ಇವನನ್ನು ಅರೆಯುತಿಹವು.

ಸಿನಿಮ—ಹೋಟಲ್—ಸರ್ಕಸ್ಸು—ಆ ದೊಂಬರಾಟ
ಇಸ್ಪೀಟು—ಸಿಗರೇಟು—ಹಾವಾಡಿಗನ ಮಾಟ
ಕಾವ್ಯಪಾರಾಯಣ—ಭಾಷಣ—ಹರಿಕತೆಯ ಸವಿಯೂಟ,
ಓ ಎಷ್ಟೊಂದು—ನೋವ ಮರೆಯಲು ಮಾನವನು
ಮಾಡಿರುವ ಹೂಟ!

ಮುರುಕು ಜೋಪಡಿಯೊಳಗೆ
ಮಳೆಯು ನೀರಿಳಿವಂತೆ
ಇಳಿಯುತಿಹ ತಲೆಯೊಳಗೆ ನೂರು ಚಿಂತೆ:
ಒಳಗೆಲ್ಲ ಕೆಸರು. ಬರಿ ಕೆಸರು: ಅದರೊಳಗು

## THIS MAN

*G. S. Sivarudrappa*

His cauldrons see the
In the nest of the heart
They tick:
A wreckage of clocks.
A hundred bogeys
Shuttle night and day
Upon these rails.
These are the noises; and then
The silence.

Light and dark goad him
As they run.
The embered east, and night
As she unfurls her parasol
Of a million holes, and that flood
Of sighs we call the wind,
All these run over him
Without pity, without end.

Circuses, movies, restaurants,
Acrobatic shows,
Cigarettes, cards, snake-charming
Feats, poetry circles, and the high-falutin'
Of endless talks,
All that feast of myth and legend:
These and such as these,
Are placebos for his pain.

From the cracks in his ceiling
Stream the rains, the thoughts,
And muddy the floors. But
Green are the shoots of desire.

ಮೊಳೆಯುತಿವೆ ಆಸೆಗಳು ಹಸುರಿನಂತೆ !
ಆದರೂ, ಆದರೂ, ನಿರಾಸೆಯಲಿ ಮುಳುಗಿ
ನೋಯುಸಿಪನು,
ಕೋಪದಲಿ ದೈವವನು ಶಪಿಸನಿಪನು;
ಬೆಳಕ ಮುಡಿಯಲಿ ಹೊತ್ತು ನಿಂತ ಲಾಂದ್ರದ ಹಾಗೆ
ನಿಂತಿರುವನು.
ಸುತ್ತ ಅನ್ಯಾಯಗಳ ಸಂತೆ ಸಾಗಿರಲಾಗಿ
ವಿಲಯ ಮೌನದೊಳಿಪನು ದಿಟ್ಟಿಸುವನು !

Still, despair
Does not drown him,
He does not curse his gods,
But bears like a patient pole
A light upon his head
His silence, a fire, keeps a vigil
In corruption's wakes and fairs.

*Tr. A. K. Ramanujan*

# ವ್ಯರ್ಥ

ಜಿ. ಎಸ್. ಶಿವರುದ್ರಪ್ಪ

ಇಲ್ಲ. ನಾವೂ ನೀವೂ ಸೇರಲೇ ಇಲ್ಲ:
ಮುಖಕ್ಕೆ ಮುಖ. ಎದೆಗೆ ಎದೆ ಹತ್ತಿರ ತಂದು
ಮಾತಾಡಲೇ ಇಲ್ಲ.
ನಮ್ಮ ಮಧ್ಯೆ ಸದಾ ಗಾಳಿ, ಮಳೆ ಕೆಸರು;
ತಂತಿಕಂಬಗಳುರುಳಿ.
ಇದ್ದ ಸೇತುವೆ ಮುರಿದು
ಅಲ್ಲಿನ ಗಾಡಿ ಅಲ್ಲೇ
ಇಲ್ಲಿನ ಗಾಡಿ ಇಲ್ಲೇ.

ಮುಚ್ಚಿದ ಕಿಟಕಿ, ಹೊಗೆ ಹಿಡಿದ ಸೂರಿನ ಕೆಳಗೆ
ಒಡೆದ ಕನ್ನಡಿಯಲ್ಲಿ ಮುಖ ನೋಡಿಕೊಳ್ಳುತ್ತ
ಗಿಡಗಲ್ಲರಳುತ್ತಿದ್ದ ಮೊಗ್ಗುಗಳನ್ನು ಬಡಿದು ಕೆಡವುತ್ತ.
ಆಮೆ ಚಿಪ್ಪುಗಳಲ್ಲಿ ಮೈಮರೆಸಿಕೊಂಡು ಲೊಚಗುಟ್ಟುತ್ತ.
ತಲೆಯನ್ನು ಗಾಳಿ ಊಳಿಡುವ ಪಾಳುಗುಡಿ ಮಾಡಿ
ಹತ್ತಿದ ಹಣತೆಗಳನ್ನು ನಂದಿಸುತ್ತ
ಕತ್ತಲಲ್ಲೇ ತಡಕಾಡಿಕೊಂಡು ಕೈ ಚಾಚುತ್ತೇವೆ,
ರಾಂಗ್ ನಂಬರಿಗೆ ಟೆಲಿಫೋನು ಮಾಡಿ
ಉತ್ತರಕ್ಕೆ ಕಾಯುತ್ತ ಕೂರುತ್ತೇವೆ.

## FUTILITY

*G. S. Sivarudrappa*

No, you and I—
We didn't come together;
Face to face, in an embrace,
We didn't speak.
There's always wind, rain
And slush between us;
The poles of the powerlines
Are uprooted,
The bridge has collapsed,
The wagons remain unmovable
At either ends.
The window is closed,
Under the smoke-coated roof
Looking our images
In the broken mirrors,
Nipping the flower buds
That were about to blossom,
Hiding ourselves in the tortoise
Shell caps and cursing,
Turning our heads into
Abandoned temples
Where the wind howls,
Snuffing out the lighted candles—
We grope in darkness,
Dialing a wrong number
We sit waiting for the answer
From the other end.

*Tr. Jayasudarshana*

# ಗಡಿಯಾರದಡಿಯಲ್ಲಿ

ಜಿ. ಎಸ್. ಶಿವರುದ್ರಪ್ಪ

ಎಂದಿನಿಂದಲೊ ಏನೊ ಒಂದೇ ಸಮನೆ ನಡೆಯುತ್ತಲಿದೆ
ಈ ಗಡಿಯಾರ.
ಸೆಕೆಂಡು. ನಿಮಿಷ. ತಾಸುಗಳ ತೋರಿಸುತ್ತ ತಿರುಗುತಿವೆ ಮುಳ್ಳು
ಹಗಲೂ ಇರುಳು;
ಗಂಟೆ. ಅರೆಗಂಟೆಗೊಂದೊಂದು ಸಲ ಮೊಳಗಿದೆ ಕೊರಳು.
ನಾಳ ನಾಳಗಳಲ್ಲಿ ಮಂಜಿನುರುಳು!

ಮಳೆಯೊ ಬಿಸಿಲೋ ಮಂಜೊ, ಏನಾದರೇನಂತೆ
ಕಪ್ಪುಗಾಜಿನ ಒಳಗೆ ಚಲಿಸುತಿವೆ ನಕ್ಷತ್ರಗಣ
ನಿಶ್ಚಿಂತೆ—
ಎಡೆಬಿಡದೆ ಹೊಳೆ ಹರಿಯುತಿವೆ ಸಾಗರಕೆ;
ಎಷ್ಟೊಂದು ಸಿಹಿನೀರ ಹೊಳೆ ಹರಿದರೂ ತೀರದಿದೆ
ಉಪ್ಪುಕಡಲಿನ ಕಪ್ಪು ಬಾಯಾರಿಕೆ!

ರುದ್ರಭೂಮಿಯ ತುಂಬ ಬೇಂದ ಬದುಕಿನ ಬೂದಿ,
ನೂರು ಗೋರಿಯ ಮೇಲೆ ಮೊಳೆವ ಹಸಿರು!
ಅರೆಮುರಿದು ನಿಂತಿರುವ ಕೋಟೆಕೊತ್ತಲಗಳಲಿ. ಹಳುಬೆಳೆದು
ತೊಗಲ ಬಾವಲಿ ರೆಕ್ಕೆ ಬಡಿವ ಸದ್ದು.
ನೆಲವೊಳೆಂದೋ ಹೂತು ಹಾಳಾದ ನಗರಗಳ ಅಗೆದು
ಅವಶೇಷಗಳ ತೆಗೆವ ಪ್ರಾಚ್ಯ ಸಂಶೋಧಕರ
ಗುದ್ದಲಿಯ ಸದ್ದು!

ನಟ್ಟನಡುರಾತ್ರಿಯಲಿ ಎದ್ದು ಕುಳಿತನು ಇವನು;
ಭೋರ್ಗರೆದಿತ್ತು ಇರುಳಿನ ಹೊನಲು—
ಕಪ್ಪು ಮಡುವಿನ ಒಳಗೆ ಮೊಸಳೆ ಹಲ್ಲಿನ ಮಸೆತ:
ಟಿಕ್. ಟಿಕ್. ಟಿಕ್ . . . .
ಕೈಗಡಿಯಾರ ತಲೆದಿಂಬಿನಲಿ ಮಿಡಿಯುತಿದೆ.
ಎದೆ ನಡುಗುತಿದೆ!

## UNDER THE CLOCK

*G. S. Sivarudrappa*

Who knows since when it is working
This Clock;
Seconds, minutes, hours—the hands mark
Night and day.
And hourly, half-hourly, rings its moan
While the snow rolls in the veins!

Snow or sunshine (does it matter?)
The stars roll in the blue vault
Undisturbed.
Ceaselessly the river flows to the ocean.
But the dark thirst of the salt waves
Is never slacked.
For all the sweetness in the river flows.

The cremation ground is thick with the ashes of burnt lives;
Over a hundred graves the grass grows;
And in the forts and battlements half-ruined
Echoes
The bat's leathery wing;
While underneath,
Excavating the remnants of lost cities,
The archaeologists' spades
Ring.

In the dead mid-dark he sat bolt upright;
In the Darkness' roar;
And heard
The gnashing of white teeth in the Dark Waters—
Tick, tick, tick,
The wrist-watch near the pillow
Shattering his bones.

ಕೋಳಿ ಕೂಗಿತು; ಬೆಳಗು ಕರೆಯಿತು ಗಾಳಿ ಸಂಚಾರಕೆ.
ಚಿಗುರು ಹೂ ಹೀಚುಗಳ ಹಾದಿ ಮುಗಿಯಿತು ಇನ್ನು,
ಮುಂದೆ ಕಾಣುತ್ತಲಿದೆ ಬೋಳು ಮರಗಳ ರಸ್ತೆ,
ಅತ್ತಿತ್ತ ಅಸ್ಥಿಪಂಜರ ನಿಂತು ಕೊಡುವ ಗೌರವ ರಕ್ಷೆ:
ಉದುರಿದೆಲೆಗಳ ತುಳಿದು ನಡೆದು ಬಂದನು ಇವನು.
ಕಾಣಿಸಿತು ಅರವತ್ತನೆಯ ಮೈಲಿಕಲ್ಲಿನ ನೆರಳು !

ಕೈಕೋಲ ಮೂಲೆಯೊಳಿಟ್ಟು ನಿಲುವುಗನ್ನಡಿಯೆದುರು
ಬಂದು ನಿಂತ.
ತಲೆತುಂಬ ಪಾಗಿಯ ಮುದ್ರೆ: ಕಮರಿದ ಕೆನ್ನೆ: ಮಾಸಿದ ಕಣ್ಣು;
ತನ್ನದೇ ಈ ಚಿತ್ರ.
ಗೋಡೆಯ ಮೇಲೆ ತೂಗುತಿದೆ ಹರೆಯುಗಳ ಹೊಂಬಿಸಿಲ
ಹಿಡಿದು ತೆಗೆಸಿದ ಫೋಟೋ.
ಅದರ ಮೇಲೆ ತೂಗುತಿದೆ ಈ ದೊಡ್ಡ ಗಡಿಯಾರ—
ಟಿಕ್—ಟಿಕ್—ಟಿಕ್ . . . .

* * * *

ಕನ್ನಡಿಯೆದುರು ಒಂದೊಂದೆ ಬಿಳ್ನವಿರ
ಹಿಡಿದ ಕೀಳುವ ಚಪಲ:
ಇಲ್ಲ. ಅಂಗಡಿಯಿಂದ ಕಪ್ಪು ಬಣ್ಣವ ತಂದು
ಬಳಿದು ಕರ್ರಗೆ ಮಾಡಿ. ಬೈತಲೆ ತೆಗೆದು
ಹಳೆಯ ಸೂಟನು ಮತ್ತೆ ಇಸ್ತ್ರಿ ಮಾಡಿ
ತೊಟ್ಟು ಪೇಟೆಯ ತುಂಬ ಅಲೆವ ಬಯಕೆ.
ನಡುಮನೆಯಿಂದ ರೇಡಿಯೋ ದನಿ ಕೇಳಿಸಿತು :
'ಭಜ ಗೋವಿಂದಂ ಭಜ ಗೋವಿಂದಂ
ಭಜಗೋವಿಂದಂ ಮೂಢಮತೇ . . . . . .'
ಕುಸಿದು ಕುಳಿತನು ಕುರ್ಚಿಯಲಿ ಚಿಂತಾಕ್ರಾಂತ,
ಗಡಿಯಾರಗಳ ದನಿಗೆ ಕಿವಿಯ ಮುಚ್ಚಿ.
ಮನೆಯೊಳಗಿಂದ ಪುಟ್ಟ ಮೊಮ್ಮಗು ಬಂತು.
ಸಕ್ಕರೆಯ ತೊದಲಿಂದ 'ಅಜ್ಜ' ಎಂದಿತು ಒಮ್ಮೆ.
ಮುಂಬೆಳಗಿನೆಳೆಬಿಸಿಲು ಸಂಜೆಬಾನಿಗೆ ಬಿತ್ತು !

The Cock crows
The dawn, wind calls for a morning walk
And the path of bloom and bud is over;
A guard of honour by the skeleton-trees.

He has walked over the dead leaves,
The dry leaves,
And now the shadow falls
Of the Sixtieth milestone.

Leaving his staff in the corner
He stood before the mirror;
Head stamped with winter, cheeks sunk, eyes dull—
His own portrait!
But on the wall is hung his photo
Taken in the gold light of youth.
It is on that the Clock is ticking,
The huge Clock, tick, tick, tick.

It is a great temptation to stand before the mirror
Plucking out the grey hairs one by one;
Or better, to dye it black,
And well combed,
Walk the streets in the old suit new pressed.
But the Radio blares;
"Think of the Lord, O fool, think of the Lord."

He stumped into the chair engrossed
Shutting out the tick of the clock.
But his little grandchild came lisping
'Grandpa!'
At that sweet sound
The golden dawn light flashed
Brightening the evening skied!

*Tr. K. S. Yadurajan*

# ಹಸಿವು

ಟಿ. ಆರ್. ರಾಜಶೇಖರಯ್ಯ

ಎಷ್ಟು ವರುಷ ಬದುಕಬೇಕೊ
ಅನ್ನವೆಲ್ಲ ತಿನ್ನಲು,
ಎಷ್ಟು ಬಿಸಿಲ ಪಯಣ ಬೇಕೊ
ನೀರನೆಲ್ಲ ಕುಡಿಯಲು.
ಒಂದು ಕ್ಷಣಕೆ ಬಕನೆನೊಲಾಗಿ
ಎಲ್ಲ ತಿನ್ನಲಾರನೆ,
ಒಮ್ಮೆ ಮುನಿ ಅಗಸ್ತ್ಯನಾಗಿ
ಎಲ್ಲ ಕುಡಿದು ಮುಗಿಸೆನೆ.
ಆರು ಅಡಿಯ ಗುಡಿಸಿಲೊಳಗೆ
ಬಾಳು ಹೊಲಸು ಮಾನಸಿಗೆ.
ತಿರೆಯುರಮನೆಯನ್ನೆ ಪಡೆವ
ಆಸೆಯಿರಲು ಕನಸಿಗೆ.
ಒಮ್ಮೆ ಹಿರಣ್ಯಾಕ್ಷನಾಗಿ
ಭೂಮಿಯನ್ನೆ ಕದಿಯೆನೆ.
(ಅವನೊಲದನು ಅಡಗಿಸಿಡಲು
ನೀರಲಾರನು ಪೂರ್ಣನೆ.)

ಯಾವ ಕತೆ ಪುರಾಣಗಳಲು
ಬರದ ಮಹಾ ರಾಕ್ಷಸ
ದೇಹ ಪಡೆದು ಶಕ್ತಿ ತಳೆದು
ಗಳಿಸಿ ಹಿರಿಯ ಸಾಹಸ,
ಸಿಂಹದಂತೆ ಎಳೆದು ಬಯ್ದು
ಅಡಗಿಸಿಟ್ಟು ತಿರೆಯನು,
ಗಳಿಗೆಗಳಿಗೆಗಿಷ್ಟರಂತೆ
ಕಿತ್ತು ಕಿತ್ತು ತಿನುವೆನು.
(ನಡುವೆ ನಡುವೆ ಸಾಗರಗಳ
ನೀರನಿಷ್ಟು ಕುಡಿವೆನು.

## HUNGER

*T. R. Rajasekharaiah*

Too long the sybiline living for ages
To devour all the earth's foot,
Long the unnumerable summer odysseys
To drink up all its water.
O for once to be the Giant *Baka*
To consume the entire feast;
And for once the Sage *Agastya*
To gulp down all its seas!
Life in this six-feet hutment
Tantalizes the mind
When passions for the palace earth
(Like the wheel of Ixion)
Torture the ardent soul.
O for once to be the Giant *Hiranyaksha*
To grab the whole of the globe
(But I wouldn't be that heartless fool
To merely hide it in the sea!)

For vaster than the stature and build
Of giants of epic and myth
I'd grow in power of sinew and gland
To drag the earth like a starved lion
And cache it in a nook
For huge mouthfuls to tear by the hour
(In between the immense hunks
The oceans to wash them down
And thickly wooded jungles
For the occasional pickles).
The fruits of the perpetual springs to come
Infantly hid in the roots,
The golden cheese of the juicy sap
(Shy at the dressing mirror)
Deep inside the cells of the earth

ಉಪ್ಪಿನಕಾಯಂತೆ ರುಚಿಗೆ
ಕಾಡುಗಳನೆ ಕಡಿವೆನು.)
ಬೇರಿನೊಳಗೆ ಅಡಗಿ ಕುಳಿತ
ಮುಂದೆ ಬರುವ ಹಣ್ಣನು,
ನೆಲದ ಗರ್ಭದೊಳಗೆ ಹುದುಗಿ—
ದೆಲ್ಲ ರಸದ ಗಿಣ್ಣನು.
ಉಣುವೆ, ಗದ್ದೆ ಗದ್ದೆಗಳನೆ
ಕುಡಿವೆ ಹಳ್ಳ ನದಿಗಳ.
ನಂಚಿಕೊಳ್ಳಲಾಯ್ತು ತರಿವೆ
ಹಸಿರು ಎಲೆಯ ಮರಗಳ.

ಭೂಮಿಯೆಲ್ಲ ಸವಿದ ಮೇಲೆ.
ಮೇಲೆ ಕೈಯ ಚಾಚುವೆ.
ಬೆಣ್ಣೆಮುದ್ದೆಯಂತೆ ಹೊಳೆವ
ಚಂದಿರೆಯನು ಬಾಚುವೆ.
ತಿನ್ನೆ ನಾನು ಅವಸರದಲಿ
ಹಲ್ಲೊಳಗಿಯೆ ಅವಳನು.
ಸವಿವೆ ಮಗುವು ಸೀಪುವಂತೆ
ಬಿಳಿ ಪೆಪ್ಪರುಮಿಂಟನು.

ಎಲ್ಲ ಮುಗಿದ ಮೇಲೆ ತೇಗಿ,
ತುಟಿಗೆ ಸವರಿ ನಾಲಗೆ,
(ಬಾನ ಹಾಸಿ ಮುಗಿಲ ಹೊದ್ದು.
ಗಾಳಿ ಹಾಡೆ ಜೋಗುಳ),
ಮಲಗಿ ದೀರ್ಘನಿದ್ದೆಗೈವೆ
ಬ್ರಹ್ಮಾಂತರದಾಚೆಗೆ.

I'll pounce and jaw,
And sink my lusty teeth into the rounded flesh
Of succulent farms and fields,
Sipping the wine of streams and rivers,
While all the time on a sidedish for salad
Would come in the verdured woods.

The bellyfilling earth at length finished,
I'll stretch my hands for the delicious dessert
Up on the silver platter the sky
And snatch the white pudding topped with cream
The full delightful moon.
I shan't certainly bolt her in haste
Nor bite into her in manners crude,
But like a child's dainty sweetmint
(Or like the enduring chewing gum)
Roll her around in my raptured mouth
And gently suck her sweetness in.

When at last the repast over
The delectable burp issues,
I'll run my tongue on my honeydewed lips
To lick away the last lees in
(And spread the sky for an ample bed,
With the clouds covering me for warmth
And the winds singing lullaby),
Then stretch my limbs for a long siesta
Right through a day of *Brahma.*

*'Tr. the Author*

# ಏನೂ ಬೇಡ

**ಶಾಂತರಸ**

ಯಾವ ಆದರ್ಶವೂ ನನಗೆ ಬೇಡ
ಯಾವ ಧರ್ಮ ಯಾವ ಕಟ್ಟಳೆಯೂ ನಾನೊಲ್ಲೆ
ಉಪದೇಶದ ಹೊರೆ ನನ್ನ ಹೆಗಲ ಮೇಲೆ ಹೊರಿಸಬೇಡ
ಯಾರ ಅಂಗೈಯನ್ನೂ ನನ್ನ ತಲೆಯಮೇಲಿರಿಸಿಕೊಳ್ಳಲು ನಾನೊಲ್ಲೆ.
ನನಗೆ ಏನೂ ಬೇಡ
ನಾನೇನನ್ನೂ ಒಲ್ಲೆ
ನಾನು ಸುಮ್ಮನೆ ಬದುಕಬೇಕೆಂದಿರುವೆ
ಯಾರ ಹೊರೆಯೂ ಬೇಡ
ಮಂದಿಗೆ ಹೊರೆಯಾಗುವುದೂ ಬೇಡ
ಸುಮ್ಮನೆ ಬದುಕಬೇಕೆಂದಿರುವೆ.
ನನ್ನ ದಾರಿಯಲ್ಲಿ ಯಾವ ಕೈಗಂಬಗಳೂ ಬೇಡ
ಮೈಲುಗಲ್ಲುಗಳೂ ಬೇಡ
ಅಜ್ಜ ನೆಟ್ಟ ಹಣ್ಣಿನ ಗಿಡವೂ ಬೇಡ
ಅಮ್ಮನ ಬುತ್ತಿಯೂ ಬೇಡ
ಅಪ್ಪನ ಧೈರ್ಯವೂ ಬೇಡ
ಏನೂ ಬೇಡ—
ನಾನು ನನ್ನ ದಾರಿಯಲ್ಲಿ ಸುಮ್ಮನೆ ನಡೆಯಬೇಕೆಂದಿರುವೆ.
ಇಲ್ಲ—
ಅಸಾಮಾನ್ಯನಾಗುವ ಇಚ್ಛೆಯಿಲ್ಲ
ಇನ್ನೊಬ್ಬರಿಗೆ ಆದರ್ಶವಾಗುವ ಹಂಬಲವಿಲ್ಲ.
ಹೊಸದಾರಿ ಹೊಸ ಕಟ್ಟಳೆ ನಿರ್ಮಿಸುವ ಹವ್ಯಾಸವಿಲ್ಲ
ಇಲ್ಲ ಇಲ್ಲ—ಇಂತಹುದೇನೂ ಇಲ್ಲ
ಇಂಥವರಿಂದ ಲೋಕ ಕೊಳೆತ ಮೊಟ್ಟೆಯಾಗಿದೆ
"ಒಂದನಾಡಿ ಹೋಗಿ. ಒಂಬತ್ತನಾಡಿ"
ಹದಗೆಟ್ಟು ಅದರ ಸತ್ವ ಹಳಸಿ ಹೋಗಿದೆ.
ಹಿಂದಿನದು ಒಲ್ಲೆ—
  ಮುಂದೆ ಬರುವುದಕ್ಕೆ ಕೈಚಾಚಲೂ ಒಲ್ಲೆ
ಸುಮ್ಮನೆ ಬದುಕಬೇಕೆಂದಿರುವೆ
ನಾನೇ ನಾನಾಗಿ ಬದುಕಬೇಕೆಂದಿರುವೆ.

## NOT WANTING ANYTHING

*Shantarasa*

None of your ideals for me—
I reject all religion, all norms.
Do not burden me with your advice.
Let none pass his palm over my head.
I want nothing,
Desire nothing,
And just want to live.
I want nobody's burden,
And be nobody's burden;
I just want to survive.
Not for me guideposts on the way,
The fruit-tree planted by the grandfather,
Mother's food-packet,
Father's words of courage—
No, I want absolutely nothing,
And, please, let me walk the way I please.
No,
I have no ambition to be extraordinary,
Congeal into a model unto others—
It is not my habitual style to break new ground, make new rules—
No, no, nothing of that stuff for me.
I have judged that the world has become a rotten egg because of such things.
"Trying to speak one, you end up into nine!"
World's quality has been corrupted, its strength gone putrid.
I do not lean on the past
And stretch my hand to clutch at the future—
Now, now I want to live,
Live simply as my simple self!

*Tr. K. Raghavendra Rao*

# ಎರಡು ದಡ

**ಚೆನ್ನವೀರ ಕಣವಿ**

ಮಂಜಿನಾಚೆಗೆ ಜಡೆಗಟ್ಟಿ ಕುಳಿತ ಬೆಟ್ಟದಡಿ ಏಳು—
ಕೊಳ್ಳದಲಿ ಹುದುಗಿದೆ ಭೂತ. ಪಾತಾಳದಿಂದ
ಪುಟಿದು, ನೆಲದ ವಾಸನೆ ಒಡೆದು. ಮುಗಿಲ ಕೆಚ್ಚಲ
ಗುಮ್ಮಿ, ಹಗಲ ಬೆಳಕನು ನೆಕ್ಕಿ, ಇರುಳ ಕತ್ತಲೆ–
ಯೊಡನೆ ಬಿದ್ದು ತೆಕಿಮುಕ್ಕಿ, ಕಂಡು ಕಾಣದ ಕಾಡು–
ಮೇಡಿನ ನೂರು ಝರಿ–ತೊರೆಗೆ ಸೊಕ್ಕಿ. ಉಕ್ಕಿ ಹರಿ–
ದಿದೆ ಊರೂರ ಮೈಗೆ ತಾಗಿ ತಿಕ್ಕಿ. ಹೊಸ ನೀರು
ಹಳೆನೀರ ಕೊಚ್ಚಿ ಹುಚ್ಚೆದ್ದು ಎರಡೂ ದಡವ ಬಾಚಿ
ಬಗ್ಗಡವಾಗಿ, ತಟಸ್ಥ ತರು–ಮರದ ಬೇರಿಗೂ
ಕೈಚಾಚಿ, ಉರುಳಿ ಹೊರಳಾಡಿ ಮೈತುಂಬ ರಾಡಿಯು
ಬಡಿದು, ಈಗೀಗ ಶರತ್ಕಾಲದ ನಿದಿಧ್ಯಾಸದಲಿ ಮೆಲ್ಲ
ತಿಳಿಗೊಂಡಿಹುದು.

ಪಶ್ಚಿಮದಲ್ಲಿ ಇಳಿದ ಕೆಂಬೆಳಕು
ಪೂರ್ವದಲಿ ಹೊಂಬೆಳಕ ತೂರುವುದು. ನಿಂತಿರುವ
ದಂಡೆ ವಾಸ್ತವವೆನಲು ಆಚೆ ದಡ ಕಲ್ಪನೆಯೇ? ಈಸು
ಬಂದರೂ ಸಲೀಸು ತಲುಪುವೆವೆಂಬ ಭರವಸೆಯುಂಟೆ?
ನೆಲ–ಮುಗಿಲ ನಡುವೆ ಆಗೀಗ ಕಾಮನಬಿಲ್ಲ ಸೇತುವೆಯು.
ಸುಖ ದುಃಖಗಳ ತಡಿಗೆ ಬಡಿದು, ತೆರೆಗೆ ಹೊಯ್ದಾಡಿ
ಸೋಲು–ಗೆಲುವಿನ ತೋಳ ತೊಟ್ಟಿಲವಾಗಿ. ಎಡ–ಬಲದ
ತೋಟಪಟ್ಟಿಗೆ ನೀರವೊಗೆದು ಸಾಗಿದೆ ಹೀಗೆ.

ಎರಡು ದಡಗಳ ನಡುವೆ ಏಸು ಸಂಸಾರ ಮುಳು–
ಗೆದ್ದು ಗಾಸಿಗೊಂಡಿವೆ ಈಸುಗುಂಬಳಕಾಯಿಗಾಸೆಪಟ್ಟು.
ನಿದ್ದೆ–ಎಚ್ಚರದ ನಡುವಣಚ್ಚರಿ ಬದುಕೆ? ಕೆದಕಿದರೆ
ಒಂದಿಷ್ಟು ರಕ್ತ. ಮಾಂಸ: ಮೂಲದಲಿ ಮೂಳೆ: ನಿನ್ನೆಗೂ
ನಾಳೆಗೂ. ಯುಗ ಯುಗದಿಂದ ಬರೆದು ಗೀಚಿದ್ದೆಲ್ಲ
ಹಾಳೆ? ಜೋಗಿತಿಯಾದವಳಂತೆ ಮುಪ್ಪಾದ ಸೂಳೆ.

## THE TWO BANKS

*Chennaveera Kanavi*

In the Seven steep vales at the feet of the hill,
With matted hair, sitting beyond the fog, the buried spirit.
Shooting from underworld, following earth's scent,
From sky's under licks daylight, wrestles body-to-body
With night's darkness, swollen-headed with hundreds of streams
Flowing through forests seen and unseen, everflowing,
Touching and rubbing the bodies of towns, and the new water
Washes away the old madly, embraces both the banks
Streching hands towards the roots of neutral plants and trees,
Rolling on the ground, smearing its body with mud,
But only of late has it been slow turning limpid in autumn's
meditation.

The red light descending in the west
Scatters golden light in the east.
If the standing bank is real, is the one on the other side illusery?
Even if one knows swimming, what hope of reaching the other
bank?
Now and then appears the rainbow between earth and sky as a
bridge
Hitting the banks of joy and sorrow, buoying on waves,
A cradle on the shoulders of defeat and victory,
It carries on thus, watering the fields and gardens,to its left and
right.

How many families have drowned and survived between the shores
Hurt in its desire for the swimming gourd!
Is life a wonder between waking and sleeping?
If scrached, a little blood, some flesh, bone in the root, yesterday
and tomorrow.

Was all the writing through the ages a sheer waste of pages?
The aged courtesan becomes dedicated devotee.

ಮಳಲ ದಂಡೆಯಲಿ ಕುಸಿದಿವೆ ಕಾಲು. ಆಚೆ ತೋಪಿನಲಿ
ಕೋಗಿಲೆಯ ಜೋಗುಳ ಲಾಲಿ, ಎದುರಿಗೆ ನೀರ
ಭೋರ್ಗರೆತ. ಎಳೆತ–ಸೆಳೆತ: ಸ್ವಚ್ಛಂದ ಛಂದೋಬಂಧ
ಕ್ಷಿತಿಜದಂಚಿಗೆ ತನ್ನ ಉದ್ಬಾಹುಗಳ ಚಾಚಿ ಒಡಲ
ತೆರೆದಿದೆ ಕಡಲ ಕುಡಿವೆನೆಂದು, ಹಿಡಿದು ಕಡೆವೆ
ನೆಂದು, ತಳಸೋಸಿ ಮುತ್ತುಗಳ ಪಡೆವೆನೆಂದು.

ಎರಡು ದಡಗಳ ನಡುವೆ ಹಾಯಿ ಬಿಚ್ಚಿವೆ ದೋಣಿ,
ಮುಳುಗಿ ಮಿನುಗಾಡುತಿವೆ ಮೀನು; ದೂರ ನೀಲಶ್ರೇಣಿ.

The feet have sunk in the sandy bank. In the garden beyond,
The lullaby of the cuckoo. In front,
The roaring of waterfall, pulling and grasping; the free flowing
prosodic structure,

Reaching its long hands to the end of the sky,
Its belly open, ready to drink up the sea, to churn it,
And scour and filter its bottom for pearls.

Between the two banks, the smooth sail of boats;
The fish sink and flash; in the far background, a row of blue hills.

*Tr. K. Raghavendra Rao*

# ಕಾಲ ನಿಲ್ಲುವುದಿಲ್ಲ

**ಚೆನ್ನವೀರ ಕಣವಿ**

1

ಈ ಕಾಲನೆಂಬುವ ಪ್ರಾಣಿ
ಕೈಗೆ ಸಿಕ್ಕರೆ ಚೆನ್ನಾಗಿ ಥಳಿಸಬೇಕೆಂದಿದ್ದೆ;
ಎಲ್ಲೋ ತಲೆಮರೆಸಿಕೊಂಡು ಓಡಾಡುತಿದ್ದಾನೆ.
ಆಕಾಶದಲ್ಲಿ ಮಿಂಚಿ,
ಭೂಕಂಪದಲ್ಲಿ ಗದಗದ ನಡುಗಿ
ಜ್ವಾಲಾಮುಖಿಯೊಳಗೆ ಸಿಡಿದು ನುಚ್ಚುನೂರಾಗಿ
ನದಿನದಿಯ ಗರ್ಭವ ಹೊಕ್ಕು, ಮಹಾಪೂರದಲಿ ಹೊರಬಂದು
ನಮ್ಮೆದೆಯಲ್ಲಿ ತುಡಿವ ತಬಲವಾಗಿದ್ದಾನೆ—
ಹಿಡಿಯಿರೋ ಅವನ . . . .

ಗಡಿಯಾರದಲ್ಲವನ ಹಿಡಿದು ಗಾಣವಾಡಿಸಲು
ಹೆಣಗಿದ್ದೇವೆ.
ಹೊತ್ತು ಬಂದಾಗ ಕತ್ತೆಯ ಕಾಲು ಹಿಡಿದು
ಒದೆಸಿಕೊಂಡಿದ್ದೇವೆ.
ತುಡಿವೆದೆಗೆ ಕಿವಿಗೊಟ್ಟು, ಮಿಡಿವ ನಾಡಿಯ
ಹಿಡಿದು ನೋಡಿದ್ದೇವೆ:
ಒಳಹೊರಗೆ ಉಸಿರು ಆಡುತ್ತಿದೆ ನಿರಾಯಾಸ.
'ಬಯಲು ಆಲಯದೊಳಗೊ? ಆಲಯವು ಬಯಲೊಳಗೊ?'
ಕೊನೆಗೊಮ್ಮೆ ಅವನೇ ಎಲ್ಲ ಬಗೆಹರಿಸುತ್ತಾನೆ,
ಯಾರಿಗೂ ಅವಸರವಿಲ್ಲ ತಾನೆ?
ಈ ಕುದುರೆಯೇರಿ, ಲಗಾಮು ಬಿಗಿಹಿಡಿದು
ಸವಾರಿ ಮಾಡುವುದಷ್ಟು ಸುಲಭವಲ್ಲ.
ನಮ್ಮೆದೆಯ ಮೇಲೆಯೇ ಕಾಲಿಟ್ಟು ಓಡಿಹೋಗುವುದ
ನಾವೆಷ್ಟು ಸಲ ಅನುಭವಿಸಿಲ್ಲ?
ಸೆಕೆಂಡು, ಮಿನಿಟು, ತಾಸುಗಳ ಹಾಸುಹೊಕ್ಕಿನಲಿ

## TIME WON'T STOP

*Chennaveera Kanavi*

This chap called Time
I wanted to thrash him black and blue
If only I'd caught him.

Absconding who knows where, he runs about
Flickering in the sky,
Shivering in earthquakes,
Blown to smithereens in volcanoes,
Entering the wombs of rivers, emerging in floods—
He's become the throbbing drum in our hearts....
Oh, catch hold of him....

We've struggled to enclose him in clocks
And make him go round like pressing machines.
When the time came, we've caught the legs of the ass
And got ourselves kicked.

We've pressed our ears to the throbbing hearts
And felt the throbbing pulses.
The breath goes in and out without any trouble.
'Is the space in the house? Or the house in the space?'
In the end it's He who decides....
Hope none is in a hurry?

It's not so easy to climb this horse and ride it
Holding tight the reins.
How many times haven't we known him running away,
Stepping on our very breasts
In the warp and woof of seconds and minutes and hours,
Here and there a coloured thread
Winding the naked life
Shows off in pride.

ಅಲ್ಲೊಂದು ಇಲ್ಲೊಂದು ಬಣ್ಣದ ನೂಲು
ಬೆತ್ತಲೆ ಬದುಕ ಸುತ್ತಿ ತೋರಿಸುತ್ತಿದೆ ಡೌಲು.
ಹೆಜ್ಜೆಯಿಟ್ಟಲ್ಲೆಲ್ಲ ಜೋಲಿಹಿಡಿದಿದೆ ಮಣ್ಣು
ಧುಮುಕುತಿದೆ ನೀರು,
ಮೈಸುತ್ತಿ ಒಳಹೊಕ್ಕು ನೋಡಿದೆ ಗಾಳಿ,
ಹದ್ದು ಮೀರಿದೆ ಬಯಲು—
ಬೆಳಕು–ಕತ್ತಲೆ ಕುಂಡದಲ್ಲಿ ಮುಳುಗೇಳುತಿಹೆವು ದಿನವೊಂದಕ್ಕು
ನಿದ್ದೆ ತಿಳಿದೆದ್ದಾಗ ಭೂಮಿಯಾಕಾಶಕ್ಕೆ ದೊಡ್ಡ ಬಿರುಕು.

2

ಸದಾ ಅದೇ ಸೂರ್ಯ ಚಂದ್ರರ ಸುಪರಿಚಿತ ಮೋರೆ,
ನಮ್ಮಂತೆಯೇ ಅವರಿಗೂ ತಿರುಗುವದೊಂದೆ ಹೋರೆ.
ಆದರೂ ಆಗೀಗ ಈಚೆಯ ದಡಕ್ಕು ಹಾಯುವದು ಬೆಳಕಿನ ತೆರೆ.
ಒಡಮುರಿದೆದ್ದು ನಾಲ್ಕೂ ಕಡೆಗೆ ಕೈಚಾಚಿ
ನಿಂತಲ್ಲೆ ಬೇರು ಬಿಟ್ಟಿವೆ ವೃಕ್ಷ.
(ಅಗೆದು ನೋಡಲೆ ಬೇಕೆ?)
ಹರಡಿಕೊಂಡಿದೆ ಹಸಿರು ಸಂಸಾರ
ನಮಗು ಅದಕೂ ನಿತ್ಯ ಹೊಕ್ಕು ಬಳಕೆ.
ಆರು ಋತುಗಳು ಬಂದು ಆರೈಕೆ ಮಾಡುವವು.
ಯಾವುದೋ ಹಾರೈಕೆ ಎದೆಯೊಳಿಟ್ಟು;
ತತ್ತಿಯೊಡೆದು ರೆಕ್ಕೆ ಬಲಿತಾಗ ಹಾರುವವು ಗೂಡುಬಿಟ್ಟು.
ದೂರದಲ್ಲಿಯೆ ಸಾಲು ನಿಂತ ಪರ್ವತ ಶಿಖರ
ಆಗಿಲ್ಲ ಭೂಮಿಗೆ ಭಾರ.
ತೇಲುತಿವೆ ಅಂತರಾಳದಲಿ ನೂರು ಗೋಲ.
ಸೋತು ತಲೆಬಾಗಿಲ್ಲ ಆಕಾಶ,
ಮೂಲೆ ಹಿಡಿದು ತೂಕಡಿಸಿಲ್ಲ ಗಾಳಿ,
ಒಳಗು ಹೊರಗೂ ಹರಿದು ಸ್ವಚ್ಛವಾಗಿದೆ ನೀರು
ಅಣೆಕಟ್ಟಿಗೂ ಕೆಳಗೆ ಆರುಪಾರು.

ಎತ್ತಿನ ಬಂಡಿಯಿಳಿದು, ಬಸ್ಸಿನ ದಾರಿ ಕಾಯ್ದು, ಕಾರಿನಲಿ ತೂರಿ.
ಹಡಗ ಬಿಟ್ಟು ವಿಮಾನದಲಿ ಹಾರಿ
ಗೋಲಗಳ ಮೇಲೆ ದಾಳಿ ಮಾಡಿದ್ದೇವೆ.
ಮೈಕಿನಲಿ ಕೊಕ್ಕೊಕ್ಕೋ ಕೂಗಿ, ತುರಾಯಿ ಕುಣಿಸಿ

Wherever the foot falls, the earth holds its balance,
The water strides forward,
The air goes round the body and in it goes,
The space overbrims the limit....
We sink and rise every day in the pond of light and darkness.
When we wake up from sleep—lo,
We see a great gap between the earth and the sky.

IT'S always the same familiar face of the sun and moon.
Theirs too, like ours, is the task of going round and round.
Yet sometimes a wave of light breaks against the shore this side.

Trees have woken up, stretched their bodies,
Spread their arms in all the four directions,
Have, where they stood, grown roots
(Do we need to dig them up and see?)
The green family has spread all around,
And there are daily dealings between them and us.

Six seasons come and tend us,
Sowing some hope in our hearts.
The egg breaks, wings grow strong and they fly away
Leaving the nest.

The mountain-tops standing yonder in a line
Are not a burden to the earth.
Hundreds of stars are floating in the firmament—
The sky hasn't bowed its head in weariness under the weight.
The air hasn't resorted to a corner and dozed off to sleep.
The water has become pure flowing in and out,
Streaming out under the dam.

We've got off from the bullock-cart, waited for the bus, got into the car,
Left the ship, and flown by the plane,
And made an attack on the stars.
We've cried ourselves hoarse into the microphones, flaunted the coxcomb,
And imagined it was day-break.

ಬೆಳಗಾಯಿತೆಂದು ಭ್ರಮಿಸಿದ್ದೇವೆ.
ಹೊಸದಾಗಿ ಹೂಡಿದ ಮೂಡಲ ಹೋರಿ ಮುಸುಗರೆದು
ಅಡ್ಡಾತಿಡ್ಡ ಜಗ್ಗುತಿದೆ.
ಜೊತೆಗಿರುವ ಸಾದು ಎತ್ತಿನ ಕೂಡ ಕಾದಾಟ.
ಹೌದು, ನಾವೆಲ್ಲ ಹೊಸಬರೆ:
ಅಜ್ಜ, ಮುತ್ತಜ್ಜರಿಗೆ ಮಂಗಳಾರತಿ ಮಾಡಿ
ಕೈಯಲ್ಲಿ ಗಂಟೆ ಹಿಡಿದಿದ್ದೇವೆ.
ನೈವೇದ್ಯಕ್ಕೆ ಪಾಕವೇ ಸಿದ್ಧವಾಗಿಲ್ಲ, ಆಗಲೇ
ಪ್ರಸಾದ ಹಂಚಿದ್ದೇವೆ.
ಎದುರಿಗಿದ್ದದ್ದೆಲ್ಲ ಅಡಲು ಬಡಲು ಕಂಚೀಬಡಲು
ಹುಡುಕುತ್ತಿದ್ದೇವೆ ಕಣ್ಮುಚ್ಚಿ: ಇವರ ಬಿಟ್ಟವರಾರು?

ದಿನವು ಬಿಸಿ ಬಿಸಿ ಅನ್ನ ದೇಹಕ್ಕೆ ಹಿತ.
ಮುಂಜಾವದಡಿಗೆ ಸಂಜೆಗಾಗಲೇ ತಂಗೂಳು.
ಹಳಸಿದನ್ನವ ನಾಯಿ ಕೂಡ ಮೂಸುವದಿಲ್ಲ. ಅದೆ
ಅಕ್ಕಿ, ಜೋಳ, ಗೋದಿಗಳಿಂದ ವಿಧವಿಧದ ಪಕ್ವಾನ್ನ
ಗಮಗಮಿಸುವದು. ಉಪ್ಪು, ಕಾರ, ಹುಳಿ,/ ಸಿಹಿ
ತಕ್ಕಷ್ಟು. ಬದಲಾವಣೆಯೇ ಬಾಳಿನೊಗ್ಗರಣೆ.
ಬಾಡಿಸಿಕೊಳ್ಳಲೆಂದೆ ಉಪ್ಪಿನಕಾಯಿ.
(ಕದ ತಿನ್ನುವವಗೆ ಹಪ್ಪಳ ಈಡೆ?)
ಮಿತಿಮೀರಿದರೆ ಎಂಥ ಸುಗ್ರಾಸವೂ ಅಜೀರ್ಣ.
ಕುದಿಯುವದು. ಮಿದಿಯುವದು. ಹೊಂದಿ
ಹದಗೊಳ್ಳುವದು: ಬದುಕಿನಲಿ ಎಲ್ಲರಿಗು ತೆರೆವ ದಾರಿ.
ಶ್ರುತಿಗೂಡಿದಾಗ ಹೊಮ್ಮುವದು ಹಾಡಿನ ಲಹರಿ
ಗಾಳಿಯ ಬೆನ್ನಮೇಲೆ ಮೋಡದ ಸವಾರಿ.
ಗುಡುಗಿರಲಿ. ಮಿಂಚಿರಲಿ. ಮುಂಗಾರಿಗಾರು ಕಾತರಿಸಿಲ್ಲ?
ಉರಿವ ಬೇಸಗೆ ಚಿಗುರು ಚಿಣ್ಣರನು ಎತ್ತಿ ಆಡಿಸಿಲ್ಲ?
ಥಂಡಿಯ ಮುಸುಗಿನಲ್ಲು ಬೆಚ್ಚಗೆ ಕನಸು ಕಂಡಿಲ್ಲ?

ವರ್ತನೆಯ ನರ್ತನಕೆ ಪರಿವರ್ತನೆಯ ಸೊಬಗು.
ಕಂದ. ವೃತ್ತಗಳ ಝರಿ ತೊರೆಯ ನಡುವೆ
ಹಸುರಿಗೆ ಗದ್ಯದುದ್ಯಾನ:
ಹದಿನೆಂಟು ಬಣ್ಣನೆಯ ಹುಲ್ಲುಗದ್ದೆಯ ನಡುವೆ
ಚಂಪೂವಿನ ತಂಪುಕೊಳ.

The sturdy wild bull tied newly to the cart is snorting
And pulling this way and that, fighting
The tame companion....
Yes! we are all new-comers, of course,
We have worshipped out our grandfathers and great-grand-fathers
And held the empty bell in our hands.
The sacred offering is yet to be ready,
But already we've distributed the *prasaad*—
What we have before us—it is the game of hide and seek—
We are searching with our eyes closed:
'This is not him—who is he?'

THIS daily food, hot and fresh, is good for the body.
The food cooked in the mornings gets cold by the evening.
Even a dog doesn't nose the cold, stale food.
A variety of delicacies, invitingly sweet
Are made of the same rice, jawar and wheat,
With salt and chillies, pungency and sweetness,
Put in proportion. Change is the spice of life:
Pickles are there just for whetting the appetite.
(To one who can eat a door what's a thin puff ?)
If you cross the limit, even a feast is undigested.
Boiling, kneading, mixing, blending—in life
There is a door open for everyone.
When the tune is set, a song takes wings—
A cloud rides the back of a wind.

Whether in thunder or lightning,
Who hasn't pined for the first rains?
What hot summer hasn't raised and played
With sprouts and tendrils?
Under the full cover of the cold who hasn't
Dreamed dreams, warm and snug?
Hasn't *Tungabhadra* over-flowed on the limbs of a dry land?
The dance of existence is made beautiful by change.
In the midst of rhymes and metres of streams and rivers
The green has a prose garden.
In the midst of myriad-coloured lawns
There's a cool *champu* lake.

ನಿಬ್ಬಣಕೆ ಹೊರಟಂತೆ ಹಾಡುಗಬ್ಬಗಳ ಕೊಲ್ಲಾರಿ ಬಂಡಿ.
ಭಾವ–ಗೀತ ಒಪ್ಪಿದರೆ ಜೆಂದ ವಧೂವರ ಜೋಡಿ.
ಒಲೆ ಹೂಡಿದ ಮೇಲೆ ಅದರ ಬಿಸಿ ತಾಗುವುದು.
ಕುದ್ದು ಹಣ್ಣಾಗುವದು ನೂರು ಅನುಭವದ ನವ್ಯಪಾಕ.

ಬಗಲಗಸೆ ಅಂಗಿಯಿಂದ ಬುಶ್‌ಕೋಟಿನವರೆಗು
ತೊಟ್ಟು ಕಳಚಿದ್ದೇವೆ.
ಮಾಡಿ ಉಂಡಿದ್ದೇವೆ ಸಮಸಮಗೆ ಸೇರಿದ ಅಡಿಗೆ;
ಇರಬಹುದು ಇದರಲ್ಲಿ ಕೆಲಭಾಗ ಜೀವನಸತ್ವ ಕಡಮೆ.
ಇದ್ದ ಶಕ್ತಿಯಲಿ ತುಸು ದೂರ ನಡೆದಿದ್ದೇವೆ.
ರೂಢಿಯಾಗಿದೆ ಒಬ್ಬೊಬ್ಬರಿಗೂ ಒಂದೊಂದು ಬಗೆಯ ನಡಿಗೆ.
ಮುಖ್ಯ ಬೇಕಾದದ್ದು ಜೀವಂತ ಗತಿ. ಹೊಸ ನೆತ್ತರಿನ ಕೊಡುಗೆ.

ಕಾಲ ನಿಲ್ಲುವದಿಲ್ಲ; ನಾವು ಕೂಡುವದಿಲ್ಲ.
ಮಳೆ ಬಂದರೂ ಕಾಮನಬಿಲ್ಲು ಮೂಡುವದೆಂಬ ನಿಯಮವಿಲ್ಲ.
ಹಗಲಿರುಳ ಗಾಲಿಯಲಿ ಸೋಲು–ಗೆಲವಿನ ಕೀಲು ಭದ್ರ.
ಪಂದ್ಯಾಟದಲ್ಲಿ ಯಾರೂ ಹೆಸರು ಕೊಡಬಹುದು.
ನಿಂತವರಿಗೂ ಉಂಟು ನೋಡಿ ಸಂತಸಪಡುವ ಭಾಗ್ಯ.
ಗೆದ್ದವರಿಗಿದ್ದೆಯಿದೆ ಬೆಳ್ಳಿಯ ಥಾಲು
ಸೋತವರ ಸೊತ್ತು
ಗೆದ್ದವರನಳಿವ ಜಗದೆಲ್ಲ ಅನುಭವದ ಪಾಲು.

Crescent-roofed carts of songs are going in a marriage-procession.
If music fits the emotion, bride and bride-groom make a lyric-pair.
After you start cooking on a common oven you feel its heat.
A hundred experiences boil and mature into a new delicacy.

We've worn and thrown away clothes from long shirts to bushcoats.
We've cooked and eaten what we have liked, each one—
Probably a little deficient in vitamins, in parts—
We've walked quite far, considering our strength—
And each one is used to a different style and pace.
What is important is living movement, the flowing in of new blood.

TIME doesn't stand still; and we do not sit.
Even if there's rain ther's no law that a rainbow must follow.
The wheel of night and day has firm pegs of defeat and triumph.
Anyone may give in his name for the tournament.
They also can enjoy the fun who stand and watch.
Those that win get the silver shield.
The losers possess the right, of course,
To measure the winners and share
The experience of the world.

*Tr. Shantinath Desai*

# ನಂಬಿಕೆ

ಚೆನ್ನವೀರ ಕಣವಿ

ಅನಂತವೆಂದರೂ ಆಕಾಶಕೊಂದು ಆಕೃತಿಯುಂಟು,
ನೀಲವೆಂದರೂ ನೂರುಬಣ್ಣದ ಲೀಲೆಗವಕಾಶವುಂಟು.
ಭೂಮಿಯ ಮೇಲೆ ಕಾಲೂರಿ ನಡೆದಿದ್ದರೂ ಇದರ
ಸ್ತರಗಳ ನಡುವೆ ಸ್ಥಿರಗೊಂಡ ಒಡನಾಟ. ನಿರಂತರ ನಂಟು.
ಹಗಲೆಲ್ಲ ಹಸುರಾಗಿ, ತುಂಬುಕೆಂಪಾಗಿ, ರೆಂಬೆ–
ಕೊಂಬೆಗಳೆಲ್ಲ ಸಂಜೆ ಬಾನಿನ ನಿರಾಳ ಮನದಳಚ್ಚೊತ್ತಿ
ಚಿತ್ತಾರವಾಗಿ ಕಪ್ಪುಮುಸುಕಿನ ಒಳಗೆ ಹುದುಗುವವು
ಇದ್ದು ಇಲ್ಲದ ಹಾಗೆ. ಇರುಳಿನಲಿ ಒಮ್ಮೆಲೇ ಚಿಗುರೊಡೆದು
ಅಂತರಂಗವ ಬಿಚ್ಚಿ ಬಯಲಿಗಿಡುವದು ಬಾನು:
ಎಚ್ಚರಾಗದ ಹಾಗೆ ನೆಲದ ಮೈದಡವಿ ಮುದ್ದಿಸುವದು.
ಆಗ ಎಲ್ಲರಿಗು ನಿದ್ದೆ. ಬೆಳಗಿನ ಜಾವ ಯಾವುದೊ
ಕನಸು: ಬೆಳಗಾದ ಮೇಲೆ ಮರೆತು ನೆನೆಸುವದು—
ತಿರುಗಾಡಿ ಬರುವಾಗ ಗೆಳೆಯರಿಗೆ ಹೇಳಿ ನಕ್ಕು
ನಗಿಸುವದು; ಹೂ ಗಿಡಕೆ ನೀರು ಹಣಿಸುವದು.

*        *        *        *

ಚಳಿಗಾಲದಲ್ಲಿ ಒಂದೊಂದೆ ಎಲೆಯುದುರಿ ನೆನಪು ಕಳಚು–
ತ್ತಿರುವಾಗ ಯಾರಿಗೂ ಕಾಣದ ಹಾಗೆ ಬೇರಿಂದ ರಸ ಹೀರಿ
ಚಿಗುರಿ ನಿಂತವರಾರು? ಬಿರುಗಾಳಿ ಬೀಸಿ ಆಕಾಶದುದ್ದ
ಧೂಳೆಡರಿ ದಿಕ್ಕು ತಪ್ಪಿಸಿ. ಮನೆಮನೆಯ ಕಿಡಕಿ ಬಾಗಿಲು
ಬಡಿದು ಪಟಪಟ ಹನಿಯುದುರಿದಾಗ ಯಾರು ನೆಲಕಿಳಿದು
ಬಂದವರು? ಮರುದಿನ ಬೇಲಿಗುಂಟ ಹೂವರಳಿದಾಗ ಯಾರು
ಕಿಲಕಿಲ ನಕ್ಕು ಹೋದವರು? ನಿರ್ಮಲವಾಗಿ ನಿಂತ ಮೋಡ
ಹೊಯ್ದಾಡಿ ಎಲ್ಲೊ ಇಳಿಯುವುದು—ಭೂಮಿ ಗುಟುಕರಿಸುವದು
ಆಗೀಗ ಮಿಂಚಿ ಅಂತರಿಕ್ಷದಲೇನೊ ಹೊಳೆಯುವದು.

*        *        *        *

## FAITH

*Chennaveera Kanavi*

Infinite, yet the sky has finite forms;
Though blue, a hundred colours play in it;
Though my legs walk upon the earth, there is
A fast communion and affinity
Between one layer and another; green
All day, it flushes red at set of sun;
As though all branches had impressed their stamp
Upon the spirit, the calm evening sky
Is like a picture, and it sinks below
The murky mist, as if it is and not.
At night, the heavens suddenly blossom, and
Lays its heart bare: it strokes and lulls the earth
That she wake not; for now all is asleep.
At dawn there is a dream; forgetting it
At break of day, returning from my stroll,
I call out to my friends and laugh, and make
Them laugh; and then I water my flowery plots.
And when, in winter, leaves drop one by one
And memory itself sheds them, who is he that,
Sucking the sap through roots, to all unseen,
Bursts into sprouts? When a storm blows and shrouds
All quarters of the sky with sky-high dust,
Slamming the doors and windows in every house,
And raindrops patter on the roofs, who's he
When blossoms bloom along the hedge, who's he
That, chuckling, goes? The stagnant clouds grow stale
And, tossing, somewhere fall; the earth gulps,
Now and then something flashes in the sky!

Something in a moment suddenly is felt
Within; out of boulder on a mountain-top
A spring jets up and courses on and on,
Nobody knows where; nights and days roll on

ಯಾವುದೋ ಗಳಿಗೆಯಲಿ ಹಠಾತ್ತನೆ ಒಳಗೆ ಅನಿಸುವ–
ದೊಂದು; ಬೆಟ್ಟದ ಮುಡಿಯು ಕಲ್ಲು ಬಂಡೆಯಲಿ ಚಿಲ್ಲನೆ ಬುಗ್ಗೆ
ಚಿಮ್ಮಿ ಮುಂದೆ ಹರಿದದ್ದೆಲ್ಲೊ. ಹಗಲಿರುಳು ಜಾರುವವು
ದಿನ ದಿನವು ನನ್ನೊಳಗಿಂದ ಏನೊ ಹೀರುವವು; ಮತ್ತೆಲ್ಲೊ
ತಿರುಗಿ, ಪತ್ತೆಯಿಲ್ಲದ ಹಾಗೆ ಜೇನಿಟ್ಟು 'ಬಿಡಿಸಿಕೊ' ಎಂದು
ದುಡಿಸುವವು. ಜೇಂಗೊಡವ ಕಂಡು ಅಚ್ಚರಿಗೊಂಡರೂ
ಅವಸರಪಡುವ ಹಾಗಿಲ್ಲ: ದಾಹ ತೀರಿಸಲು ನೀರಲ್ಲ,
ಮತ್ತು ಬರಿಸುವ ಮದ್ಯವಲ್ಲ. ಅಂಗೈಯಲ್ಲಿ ಹನಿಹನಿ
ಹಾಕಿ, ನೆಕ್ಕಿ ನಾಲಗೆ ತುಂಬ ಸವಿದು, ಕಣ್ಮುಚ್ಚಿ
ತೆರೆಯಬೇಕು.

*          *          *          *

ನನ್ನ ನಂಬಿಕೆಯೊಂದು ಆಕಾಶ:
ನಿಜ, ಅದಕೆ ತಳಬುಡವಿಲ್ಲ. ನಾನೆಷ್ಟು ಬೆಳೆದರೂ
ನನಗೆ ನಿಲುಕುವುದಿಲ್ಲ. ದೂರದಿಂದಲ್ಲದೆ ನಾನದನು
ಮುಟ್ಟಿ ಅನುಭವಿಸಿಲ್ಲ. ಮೇಲೆ ನೋಡದೆ ಸೆಟೆದುಕೊಂಡೇ
ನಡೆದರೂ ಅದು ಸದಾ ನನ್ನ ತಲೆಯಮೇಲೆ.
ಹಗಲು ಹೊತ್ತಿನಲಿ ಅದರೆಡೆಗೆ ಲಕ್ಷ್ಯವಿಲ್ಲ. ನಮ್ಮ ಬದುಕಿನಲಿ
ನಾವು ಮಗ್ನರಾದರೆ ಸಾಕು. ಅದಕೆ ಚಿಂತೆಯಿಲ್ಲ.
ರಾತ್ರಿ ವಿದ್ಯುದ್ದೀಪ ಕೈಕೊಟ್ಟು. ಮಿಣಿಮಿಣಿ ಮೇಣ–
ಬತ್ತಿಯು ಹಚ್ಚಿ. ಅಂಜಿ ಅಕಳಿಸುತ್ತ ಕುಳಿತಾಗಲೂ
ಆಕಾಶದಲ್ಲಿ ಹೊಳೆವ ನಕ್ಷತ್ರಕ್ಕೆ ಲೆಕ್ಕವಿಲ್ಲ.

And suck out something from me day by day.
A honeycomb he puts somewhere, somewhere;
And, telling me to 'collect' drives me to work.
And though I find it to my wonder, yet
I make no haste to get it; for it is
Nor water to allay my thirst, nor wine
To make me drunk. A little must I drop
Into my hand, and taste it lick by lick,
Rolling my eyes....
My faith itself is sky!
It has no base or bottom; how tall I grow,
I never shall reach it, ne'er feel its touch,
But only from a distance; though I may strut
Not seeing it, it's ever o'er my head.
I never heed it in daytime; it's enough
If it is mingled with my life—no more.
At night-time, when the current fails,
We light a flickering candle and, in fear,
We yawn; even when I sit, there is
No count of stars that twinkle in the sky.

*Tr. Armando Menezes & S. M. Angadi*

# ಮಾಯಿಯ ಮೂರು ಮುಖಗಳು

(ನಾಲ್ಕನೆಯ ಮುಖವನ್ನು ಕಂಡಿಲ್ಲ)

**ಶಂಕರ ಮೊಕಾಶಿ—ಪುಣೇಕರ**

ಮಾಯಿ, ಮಹಾಮ್ಮಾಯಿ
ಮೂರು ವಿಧದಿಂದ ನೀನೆಮ್ಮ ತಾಯಿ.
(ಸಾಕು ತಾಯಿ: ದತ್ತತಾಯಿ; ಹೆತ್ತ ತಾಯಿ.)
ಮೊಟ್ಟಮೊದಲಿಗೆ ಬರುವಿ ಸಾಕುತಾಯಾಗಿ
ಬಳಸುವೆಯೆ ಬಾಳ ಬೆಳೆಸುತ್ತ ಹಾಯಾಗಿ.
ಕರುಳಿಗೊಂದು ಹೊಸ ಕರುಳ ಪಾರಂಬಿ
ಇಳಿಬಿಟ್ಟು ನೆಲವ ನಿನ್ನದೆ ಮಾಡಿಕೊಂಬಿ.
ಮುಟ್ಟಿದರೆ ಮಾಸುವಾ ಸುಳಿಗೆಂಪು ಕಂಬೆ—
ಒಂದೊಂದು ಎತ್ತಿ ಹಿಡಿದಿದೆ ಸೊಟ್ಟ ಥೆಂಬಿ.
ನಿನ್ನ ಅಚ್ಚೆಯು ಕೈಯ ತುತ್ತನುಂಡವರು
ತಮ್ಮ ಮುಂಗೈ ಬಲವ ಕಳೆದುಕೊಂಡಿಹರು.
ಕಣ್ಣುಗುಡ್ಡಿಯೆ ಆಗಿ ಕುರುಡುಗೊಳಿಸುವೆಯಾ?
ನೆರಳು ನೀಡುತ ಸಸಿಯ ಬರಡುಗೊಳಿಸುವೆಯಾ?

ಆಮೇಲೆ ಬರುವಿ ನೀ ದತ್ತತಾಯಾಗಿ—
ಕರ್ತವ್ಯಗಳ ತೂಗುಹಲಗೆಯನೆ ತೂಗಿ.
ಆಕಾಂಕ್ಷೆ, ಅಭಿಮಾನ, ಕರ್ತವ್ಯ, ಕಾಯಾಸ
ಆದರ್ಶ, ಆವೇಶ, ಮೂದಲಿಕೆ, ಹವ್ಯಾಸ—
ಚಾಣಕ್ಯ ಚಂದ್ರಗುಪ್ತರ ಜತೆಯ ರೀತಿ.
ವಿದುಲೆಯಂಥ ಕಠೋರ ಪುತ್ರ ಪ್ರೀತಿ.
ಮಾತುಮಾತಿಗು ಈರ್ಷೆ, ಆಸೆ, ಕೆಚ್ಚು.
ಕೊಟ್ಟ ಸಾಲಕು ಕೇಳ್ವ ಬಡ್ಡಿಯೇ ಹೆಚ್ಚು.
ಕುಳಿತವನ ಕಿವಿ ಹಿಂಡಿ ಮೇಲಕೆಚ್ಚರಿಸಿ
ಲೆಕ್ಕ ಕೇಳುವಿ ಪೈಗೆ ಪೈಯ ಸವಕರಿಸಿ.
'ನುಗ್ಗಿನಡೆ'ಯೆಂಬ ನಿನ್ನೀ ಪಾಂಚಜನ್ಯ
ಕೇಳಿ ನಡೆಯಲು ತ್ರಾಣ ಉಳಿದವನೆ ಧನ್ಯ.

## THE THREE FACES OF MOTHER

(Haven't seen her fourth face as yet)

*S. R. Mokashi Punekar*

Mother, great mother,
Our mother in three distinct ways.
(Mother the rearer; the adoptive mother; mother the bearer)
First you come as mother the rearer
Looking after us as we grow care-free.
Growing a new adventitous root of affection,
Sending it to ground, you make the soil your own.
A trunk whose red is so delicate as to soil at touch—
Supports each bough that is twisted.
Those who have eaten from your loving hands
Have lost the strength of their forearms.
Being our eyes' pupil, would you make us blind?
Offering a gift of shade, would you make the plant barren?

Then you come as the adopting mother,
Swinging a plank of duties.
Deep desire, pride, duty, firmness,
Ideals, spiritedness, contempt, habit—
Like the relationship between *Chanakya* and *Chandragupta*
The cruel maternal love of *Vidule*.
At every word, rivalry, possessiveness, spiritedness,
The interest you demand far exceeds the capital you loaned.
Raising the seated one by his ears,
You demand accounts to the last coin.
Hearing your conch-call, "Rush forth",
Blessed is he who has yet energy left to obey it.
In our last days you come as mother the bearer.
Like the barking dog behind the dreams behind dreams.

As if to ridicule the three paths of the sky,
In the navel go on worries and sorrows.
The conquerors of death have fled from the battle.

ಕೊನೆಗಾಲ ಬರುವಿ ನೀ ಹೆತ್ತ ತಾಯಾಗಿ
ಕನಸ ಹಿಂದಿನ ಕನಸ ಬೊಗಳು ನಾಯಾಗಿ.
ಮುಗಿಲ ಮೂವಟ್ಟೆಗಳ ಮೂದಲಿಸುವಂತೆ
ನಡೆದಿರಲು ಹೊಕ್ಕಳಲಿ ವ್ಯಾಕುಲತೆ ಚಿಂತೆ.
ಮರಣವನು ಗೆದ್ದವರು ರಣದಿ ಓಡಿಹರು.
ಕಳೆದ ಕ್ಷಣವನು ಅಂಗಲಾಚಿ ಬೇಡಿಹರು.
ಯದ್ವಾ ಜಯೇಮ ಯದಿ ವಾ ನೋ ಜಯೇಯು
ಎಂದು ನಡುಗಿತ್ತು ನರ, ಬಿಗಿದಿರಲು ಸ್ನಾಯು.
ರಟ್ಟೆಯೊಳಗಿತ್ತು; ಕಿಪ್ಪೊಟ್ಟೆಯೊಳಗಿಲ್ಲ.
ಬಿಲ್ಲಿನೊಳಗಿದ್ದ ಎದೆ ರಟ್ಟೆಯೊಳಗಿಲ್ಲ.
ಹೇಡಿ ಮಾಂಸವು ಮನದ ಮಾತು ಜರೆದಿತ್ತು.
ಮುಗಿಲಿಗಾನಿಸಿದ ನಿಚ್ಚಣಿಕೆ ಮುರಿದಿತ್ತು.
ಒಡಲು ಒಡ್ಡುವ ಬಲೆಯ ಕಣ್ಣು ನೋಡೀತೇ?
ಬಸಿರು ಬರೆದಿರುವ ಗೆರೆ ಬಾಳು ದಾಟೀತೆ?

ಈ ಹಾಡ ತಿರುಳನ್ನು ಕುರಿಯುತರಿತವನು,
ತಾಯ ಇನ್ನೊಂದು ಮೊಗವನ್ನು ಅರಸುವನು.

Have begged and entreated the gone moment.
If we win the battle or if we do not win,
So shivered the nerves, while the muscles grew tight.
It was in the arms; not in the fold below the navel.
The spirit that was in the bow was not there in the arms.
The coward flesh belied mind's words of firmness.
The ladder leaning against the sky collapsed.
Can the eyes glimpse the net that the belly spreads?
Can life cross the line drawn by pregnancy?

He who can grasp the essense of this song by frequent
meditation.

Will seek out mother's fourth face.

*Tr. K. Raghavendra Rao*

# ಇದೂ ಒಂದು ಕವನ

ಎ. ಕೆ. ರಾಮಾನುಜನ್

(ಹೇಳದಿದ್ದರೆ ತಿಳಿಯಲಾರದೆಂಬ ಆಧುನಿಕ ಶಂಕೆಯಿಂದ ಹೇಳಿಬಿಟ್ಟಿದ್ದೇನೆ. ಕ್ಷಮಿಸಿ)

ಕವಿತೆ ಬರೆಯುವುದು ಕಷ್ಟ ಎನ್ನುವರು.
ಬರೆಯುವುದಕಿಂತ
ಬರೆಯದಿರುವುದೆ ಕಷ್ಟ.
ಪಿಂಗಾಣಿ ಹೂಜಿಯ ನೆನಪು
ಸುಂದರಿಯ ಮುಂಗೈಯ ನುಣುಪು.
ಅವಳ ಕನ್ನಡಿಯ ಅವಳಿಕಲ್ಪನೆಯಂತೆ
ಎಡಕೆ ಬಲ, ಬಲಕೆ ಎಡ
ಕನ್ನಡಿಸಿ ಕಡೆದಿರುವ ಕುಪ್ಪುಸದ ಶಿಲ್ಪ
ಒಂದೊಂದು ಉಸುರಿನವು ತನ್ನಚ್ಚನೊತ್ತೊತ್ತಿ ತೆಗೆದರೂ
ಈ ಗಾಳಿ ಬೈರಾಗಿಯ ಮೈಗೆ,
ತಪ್ಪಿ ಹುಟ್ಟಿದ ಈ ಚೆಲುವಿನಚ್ಚನ್ನು
ಮಣ್ಣಿಗಾದರು ಒತ್ತಿ
ತೆಗೆದಿಡುವ
ನಾಳೆ ನೆನಪಿನ ಮೋಹವಿಲ್ಲ.
ಕವಿತೆ ಬರೆಯುವುದು ಕಷ್ಟವೇ ಸ್ವಾಮಿ,
ಬರೆಯದಿರುವುದೆ ಕಷ್ಟ.

ಯೌವನದ ಭಾಷೆಗೆ ಹೆಣ್ಣಡೆಯ ಮಂದಾಕ್ರಾಂತ.
ಹೆಣ್ಣೆಯ ಕವನ.
ಹೆಣ್ಣು ಹೋಗಲಿ. ಇನ್ನು ಮಿನುಗು–ಬೆಳಕಿನ ಕೊಚ್ಚೆಯಲಿ
ಕಪ್ಪೆಗೊರಲಿನ ಪ್ರೇಮ.
ಗುಪ್ತ ರೋಗವ ದಾಟಿ ಸಪ್ತಸ್ವರಗಳನೊಮ್ಮೆಗೇ ಮೀಟಿ,
ಅರ್ಥದೀಟಿಯನು ಮೆದುಳೊಳಗೆ
ನಟ್ಟು ಬಹ ಓಂಕಾರ ಬಾಣಗಳ ಬತ್ತಳಿಗೆ—ಬಂಜೆಯುರ
ಭಗ್ನಕಾಮ, ಭೂಕಂಪ,
ಮೂದೇವಿಯಾತುರದ ಬಿಕ್ಕಳಿಕೆ.

## THIS TOO IS A POEM

*A. K. Ramanujan*

(Now, there, I have said it all since I was obsessed with
the modern doubt that you may not follow it otherwise,
sorry).

Writing poetry is tough, they say,
But not to write is tougher.
The smoothness of a lovely woman's forearm
Reminds one of china vase.
Like the twin images of her mirror,
Mirroring left right and right left,
The mirrored and carved sculpture of her blouse—
Though each breath makes its imprint hard
On the body of this ascetic wind,
This print of loveliness, born by mistake,
Could have been made into a cast of clay,
But I have no fascination for future memories.
You still maintain that writing poetry is tough, sir?
Not to write is tougher.
To the language of budding youth, the slow prosody of a woman's walk.

The woman is the poem.
Leave the woman alone. In the twinkling gutter
The love of croaking frogs.
The wasted, burntout love of a barren woman is a quiver
Of arrows of the primordial sound,
Arising as the spear of meaning pierces the brain,
After crossing hidden maladies, plucking the seven notes all at once.
The eager hiccups of the dumb goddess are the earthquake.
Within the glow-worm, the conspiracy of the dark,
The dark of the leafless branches of lightning,
The God of Love, *Kama*, seeks his beloved, *Rati*, in the ash.
The agony carried by the bacteria multiplies, the more you trust,
Into two, then eight, and then the countless,
The grandfather becoming the grandson—

ಹುಳುದೀಪದಲಿ ಕತ್ತಲೆಯು ಒಳಸಂಚು, ಎಲೆಯೆ ಇಲ್ಲದ
ಕೊಂಬೆ—ಮಿಂಚಿನ ಕತ್ತಲೆ.

ಬೂದಿಯೊಳಗೂ ರತಿಯನರಸುವ ಕಾಮು, ಒಡೆದೊಡೆದು
ಎರಡಾಗಿ ಎಂಟಾಗಿ,
ಲಕ್ಷವ್ಯೂಹದಕ್ಷೋಹಿಣಿಯಾಗಿ ತಾತ ಮೊಮ್ಮಗನಾಗಿ
ನಂಬಿದರೆ ತುಂಬಿ ಬಹ
ಬ್ಯಾಕ್ಟೀರಿಯಾ ಬಸ್ನ. ಕೆಲವರಿಗೆ ಎಟುಕದಿಹ ಪಾಲ್ಕಗಳು ಅಸ್ನ.

ಎಂಟು ಭಾಗದ ನೀರೊಳಗೆ ಹೂತಿಟ್ಟು ಮೂಗುಗೆಡ್ಡೆಯು ಮಾತ್ರ
ಹೊರಚಾಚಿ ತೋರಿಸುವ
ಮಂಜುಗಲ್ಲಿನ ಗುಪ್ತಶಕ್ತಿಯು ಶಾಂತಿ. ತಾರಕಕೆ ಎಳೆದಿಟ್ಟ
ತಂಬೂರಿ ತಂತಿ.
ಸೌಗಂಧಿ ಹುಡುಕಿದ ಭೀಮು. ಬಾಯಲ್ಲಿ ಕಬ್ಬಿಣವ
ಕಚ್ಚಿದರು ಬಿಡದ
ಮೂರ್ಚ್ಛೆಯೊಳಗಿನ ನಡುಕ.
ಸೀತೆಯಪ್ಪಿದ ರಾಮು. ಹಾವುಗಳ ಹೆಡೆ–ಮೇಲೆ ಕಡೆದಿರುವ ಕನ್ನಡಕ.
ಅದು,
ಇದು,
ಈ ಹತ್ತು ಪದ; ಅವನೆದೆಯು ಮಾತ್ಸರ್ಯ
ಇವಳೆದೆಯು ಮೋಹಮದ.
ಇವನೆಲ್ಲ ನೋಡಿದರೆ ಕಾಡುವುದು
ಕಪನ. ಕೂಗುವದು ದವನ,
ವಾಸನೆಯು ಮೆಲುಕವನ.

ಎರಡು ಕತ್ತಲೆಯು ನಡುವೆ, ನಡುನಡುವೆ, ಆಡುವುವು
ಈ ನೆರಳು ನೂರೆಂಟು : ಊಳಿಡುವ ಆಚೆ ಮೌನವ ಕೆಣಕಿ,
ನವಿರೆದ್ದ ನಗ್ನತೆಯು ಕುಳಿರನ್ನು ಬೆಚ್ಚನೆಯು ಬಳಸಿ,
ಭ್ರಮೆಗಳನು ಬಾ ಎಂದು
ಮುತ್ತಿಟ್ಟು ಬೆಳಸಿ.

ಮಿಥ್ಯಯೋನಿಯು ಒಳಗೆ
ಸತ್ಯದೇವರ ಶುಕ್ರ : ಎಂದೆಂದಿನಿಂದಲೂ
ತಿರುಗುತಿದೆ ಈ ಪ್ರಕೃತಿ–ಪುರುಷರ ಪೋಲಿಕೆಲಸದ ಚಕ್ರ.

There are some who can't even get four grains of rice.
The peace of the power secreted in the iceberg,
Eight parts submerged in water, showing merely the nose root
Protruding it out.
*Bhima* sought by *Saughandi*, the Fragrant One.
The epileptic vibrations do not cease
Even when a piece of iron is bitten by the mouth.
*Rama* embraced by *Sita*. The sculptured mirror on a snake's hood.
This,
That,
String ten such words; the jealousy seething in this man's heart,
The intoxicating love in this woman's heart.
Seeing all this, you feel the poem nag you,
The fragrant leaves call you,
To the scented, soft poem,
Between two darknesses, intermittently
Play a hundred and eight shadows: provoking the ululating silence beyond,
Covering up warmly the nakedness tingling with goose-flesh,
Welcoming illusions,
Cultivating them with kisses.
In the lying uterus
The semen of the God of Truth:
From God knows when has been turning
This wheel of mischief between Nature and the Male.
Shouldn't this nameless orphan be named?
Won't love provoke us, who have words,
To name him,
Dust-heap, dust-bin, forest, rock, ruin, skeleton, and stone, at least ?

Writing,
And that too writing poems,
Is it difficult, sir? the poem nags,
The fragrant leaves call,
Shouts the pregnancy of the mind touching the universe;
Even if caste be lost, it is poem all right,
Not writing is tougher,
Won't you agree?

*Tr. K. Raghavendra Rao*

ಹೆಸರಿಲ್ಲದೀ ತಬ್ಬಲಿಗೆ
ನಾಮಕರಣವೆ ಬೇಡವೆ?
ಕುಪ್ಪೆ ತಿಪ್ಪೆ ಕಾಡ ಗುಂಡ ಹಾಳು ಮೂಳಯ್ಯ ಕಲ್ಲಪ್ಪ

ಏಂದಾದರೂ ಹೆಸರಿಡುವ
ಪ್ರೀತಿಯುದ್ಧಟತನ ಕಾಡದೇ
ಮಾತಿರುವ ನಮ್ಮನ್ನು?

ಬರೆಯುವುದು
ಕವಿತೆಗಳ ಬರೆಯುವುದು
ಕಷ್ಟವೇ ಸ್ವಾಮೀ? ಕಾಡುವುದು ಕವನ
ಕೂಗುವುದು ದವನ,
ಲೋಕ ಮುಟ್ಟಿದ ಮನ—ಬಸಿರು ಬೀಗಿ ಕೂಗುವುದು:

ಕುಲಗೆಟ್ಟರು ಕವನ,
ಬರೆಯದಿರುವುದೆ ಕಷ್ಟ,
ಬರೆಯದಿರುವುದೆ ಕಷ್ಟ.

# ಕಲೆ ಮತ್ತು ಜೀವನ ಸೌಂದರ್ಯ

ಎ. ಕೆ. ರಾಮಾನುಜನ್

ಮಧುರೆಯ ಧೂಳುಬೀದಿಯಲ್ಲಿ
ಕುಷ್ಠ ಈ ಗಂಡಸಿನ
ಮುಖ ಮುಂದಿದೆ.
            ಮುಖಕ್ಕೆ ಮೂಗಿಲ್ಲ
ಹಸ್ತಕ್ಕೆ ಬೆರಳಿಲ್ಲ.
            ಕಾಲಿಗೆ ಹಿಮ್ಮಡಿ
ಇಲ್ಲ.
    ಕಣ್ಣುಸುತ್ತ ಆ ಕಿಸುರು ಪಾಯಸ
ಕೈ ಸೊಳ್ಳೆ,
            ಹುಣ್ಣು ನವಿಲುಬಣ್ಣದ ನೊಣಗಳಿಗೆ
ನಾಗಮುರಿ ಹೂವು.
            ಪಕ್ಕದಲ್ಲಿ ಹೆಂಡತಿ ಕತ್ತಿನಲ್ಲಿ ಹೊಸ
ತಾಲಿ.
    ಅವನ ಹಿಂದೆ ಶತಶತಮಾನದ ಗುಡಿ—
ಬಾಗಿಲ ಅಪ್ಸರೆ.
            ಮುರಿದ ಮೂಗಿನ
ಕೆಳಗೆ ಶಿಲ್ಪಶಾಸ್ತ್ರದ ಮೂವತ್ತೆರಡನೆ ಸೂತ್ರ
ಹೇಳಿದ ಮಂದಹಾಸ.
            ಕಾಲ ಖಿಲ್ಜಿಯ ಹೊಮ್ಮಗ
ಮುರಿದ ತೊಡೆಯಲ್ಲೂ ತ್ರಿಭಂಗ.
            ತೊಡೆ ನಡುವಿನ ಬಿಲ್ಲೆ
ಮೇಲೆ ತಮಿಳು ಪೋಕರಿಗಳ
ಸಂಸ್ಕೃತ.
ನಾನು ಇವೆರಡನ್ನೂ ನೆನಸಿಕೊಂಡು
ಜೀವನ ಮತ್ತು ಕಲೆಯ ಬಗ್ಗೆ ಅಮೆರಿಕದಲ್ಲಿ
ಭಾಷಣ ಮಾಡಿದೆ.
            ಎಲ್ಲರೂ ಬಹಳ ಮೆಚ್ಚಿಕೊಂಡರು.

## ART AND LIFE'S BEAUTY

*A. K. Ramanujan*

In one of Madhurai's dirty streets,
The face of this male leper
Is splinterd.
    A face without nose,
Hands with fingers chopped off,
    And feet
Without ankles.
    Sweet pudding of pus ringing the eyes
Is infested with mosquitoes,
    The wound serves
As a snake-headed flower to peacock-hued flies.
    His wife by his side
Dons a new marriage bracelet round her neck.
    Behind him
The door-keeping heavenly courtesans
Of a centuries' old temple.
    Below the smashed nose
The thirty-secondth principle proclaimed in sculptural science
Through a gentle smile.
    Even in the thighs broken by the grandson
Of Khilji, Time incarnate, the display of the triple dancing pose.
    In the locket between the thighs
The Tamil rowdies'
Sanskrit.
Remembering these two,
In America, on Art and Life, I
Delivered lectures.
    They all appreciated it highly.

*Tr. K. Raghavendra Rao*

# ನೀರಡಿಸಿದ ನೆಲ

ಸಿದ್ದಣ್ಣ ಮಸಳಿ

1

ಬಿಸಿಲು ಬಿಸಿಲೇ ಬಿಸಿಲು
ಹರಡಿತ್ತು ತಲೆ ಮೇಲೆ ಕೆಂಡ ಕೆದರಿ
ಹದಿನೆಂಟು ಚೈತ್ರಗಳ ದಾಟಿ ಬಂದಿಹಳಿವಳು
ತಿರುಗಿ ನೋಡಿದಳೊಮ್ಮೆ ಬಂದ ದಾರಿ
ಮನದ ಪರದೆಯ ಮೇಲೆ ರಂಗು ರಂಗಿನ ಚಿತ್ರ
ನೆನಪು ಬಿಚ್ಚುತ್ತಿತ್ತು ಸುರುಳಿ ಸುರುಳಿ
ನಿಟ್ಟುಸಿರು ನರಳಿತ್ತು ಸಂಜೆ ನೆರಳಾಗಿತ್ತು
ನಡೆದ ದಾರಿಯ ಮೈಲುಗಲ್ಲನೆಣಿಸಿ
ಮನದೊಳೇನೋ ಮತ್ತೆ ಗುಣಿಸಿ ಗುಣಿಸಿ
ಮನಸು ಗರಗರ ತಿಗರಿ
ಹೌಹಾರಿ ಗಂಟಲಾರಿ !

2

ಎಡೆಯಲ್ಲಿ ಕುಣಿದಿತ್ತು ಪರೆಯು ಹದಿನೆಂಟು ವರುಷ
ಕಂಡವರ ಕಣ್ಗೆ ಹರುಷ !
ಚೈತ್ರದಲ್ಲಿ ಮರ ಮರಕೆ
ಚಿಗುರು ಹೂ ಕಾಯಿ ಹಣ್ಣು
ನೋಡಲಿದ ಸಾಕೇನು ಬರಿ ಎರಡು ಕಣ್ಣು ?
ಕಣ್ಣ ಕುಡಿ ಬೆಳಕು ಲಕಲಕ ಹೊಳೆದು ಜಾರಿತ್ತು
ರೆಷೋಲಿ ಹೊಡೆದುರುಳಿತ್ತು
ಹಾದಿ ಬೀದಿ !
ಓ . . . ಇದು ಎಂಥ ಮೋಡಿ !
ಹಗುರಾಗಿ ಬೀಸಿ ಬಂದಿಹ ಗಾಳಿ–ರತಿಗಾರ
ಇವಳ ಕೂವಲಿನಲ್ಲಿ ಬೆರಳಾಡಿಸಿ
ಒಳಸೇರಿ ತೆಳುವಾದ ಸೆರಗ ಸರಿಸಿ
ಎದೆಗಿಳಿದು ರಮಿಸಿ !

## THE THIRSTING EARTH

*Siddanna Masali*

**I**

Everywhere the sun's heat,
Over the head spread the burning coals in rage—
She has come crossing eighteen springs,
Turned back she once to look at the path she had travelled,
On mind's screen memory was reeling off
Technicolour films,
Deep breath groaned and evening shadows rose,
Counting the milestones on the path traversed,
Making incomprehensible calculations,
Mind whirled
Stunned and parched!

**II**

In the breast danced madly youthful eighteen years,
A joy to the eyes of every spectator!
In the spring the hand from every tree
Shoots, flowers, unripe and ripe fruits,
Overtaking the ability of a mere pair of eyes.
The light in the corner of eyes slipped down brilliantly,
Swayed without balance, and rolled
In roads and streets!
Oh, what magic is this!
The wind that blows here gently, a provoker of love„
Fumbles playfully in her hair,
Gets in, gently opens out her smooth saree
And fondles her breasts in play!

**III**

Filling its bosom with heart's desires,
This wealthy harvest of spring stands,
Beneath the folds of this earth
The lava of discontent seethes,
The desire of an empty heart turns into a small deer of gold,

3

ಇಂಥ ಚೈತ್ರದ ಸುಗ್ಗಿ ಸಂಪತ್ತು ನಿಂತಿಹುದು
ತನ್ನೊಲವ ಬಯಕೆಯನು ಎದೆ ತುಂಬಿಸಿ
ಈ ನೆಲದ ಪದರು ಪದರಿನ ಕೆಳಗೆ
ಅತೃಪ್ತಲಾವ ಕುದಿಸಿ
ಬರಿಯೊಡಲ ಬಯಕೆ ಬಂಗಾರ ಮರಿ ಚಿಗರಿಯಾಗಿ
ನೀರಡಿಸಿ ಹುಡುಕಿಹುದು ಸುತ್ತು ತಿರುಗಿ

4

ಓ . . . . ಓ . . . .
ಇದು ಎಂಥ ಬೇಗೆ ಒಳ ಹೊರಗು ತಾಯಿ
"ಒಮ್ಮೆ ಕಾಮನ ಕಾಲ ಹಿಡಿಯಲೇನು
ಚಂದ್ರಮಗೆ ಸೆರಗೊಡ್ಡಿ ಬೇಡಲೇನು."

ಶೂನ್ಯಾಕಾಶದಲಿ ಮೋಡ ಸಾಗಿಹವು
ನೂರಾರು ಸಾಲು ಸಾಲು
ಒಂದಾದರೂ ಇಳಿದು ಸುರಿಸಬಾರದೆ ನೀರು
ನೋಡಬಾರದೆ ನಿಂತು ನೆಲದ ಗೋಳು !

IV

Oh. . . .   Oh. . . .
What fire this is, within and without, mother,
"Shall I just for once prostrate at the feet of *Kama*, the God of Love,
Shall I beg of the moon with my saree pouched receive blessings?"

*   *   *   *   *

In the empty sky clouds move,
In hundreds of rows,
Not even one cloud cares to come down to pour water—
Wouldn't care to look at the agony of earth!

*Tr. K. Raghavendra Rao*

# ಕೋಳಿ ಕೂಗಿತು

ಜಿ. ಎಸ್. ಸಿದ್ಧಲಿಂಗಯ್ಯ

ಕಾಮಧೇನುಗಳ ಕೊಟ್ಟಿಗೆಯಿಂದ ನಿದ್ದೆ ಕಲಕಾಡಿ ಕೆದರಿ
ನುಗ್ಗಿ ಬರುತಿದೆ ಗುಟುರು.
ಕಲ್ಪವೃಕ್ಷಗಳ ಕಾಡಿನಲ್ಲಿ ವಿಶ್ರಾಂತ ಹುಂಜದ ಕೂಗು.
ಅಮರಾವತಿಯಿಂದ ನೆಲದವರೆಗೋಡಾಡುತಿಹ
ಪರಪರಗುಟ್ಟಿ
ತರಗುಟ್ಟುತಿಹ
ಮದೋತ್ಕಟೆದೆಗಣ್ಣೋಟ ನಾಟಿ
ನೆಲದಲ್ಲೆಲ್ಲ ಛಳಿ ನಡುಕ.
ಮರಮರವಪ್ಪಿ ಬಿಳಿವೂ ಸೋರಿ
ಆಶ್ರಮದ ತಿಳಿನೀರು ಬಗ್ಗಡ.
ಅರೆರಾತ್ರಿಯಲ್ಲುರಿಯುತಿಹ ಯೋಗಾಗ್ನಿಗೂ ಛಳಿನಡುಕ.
ಹೋಮಗಂಧದ ಮೂಗುಬಾಯಿಗು ಸೋಮರಸ ನುಗ್ಗಿ
ಲಗ್ಗೊಲ್ಯಲಗ್ಗೆ.
ಚಂದ್ರನಿಗು ಅಮಲು ಅಬ್ಬರ ಸಂಚು.
ಲೋಳಿಯಾಡಿದೆ ಬಾನು.
ನಿದ್ದೆಯೂ ಅಸ್ತವ್ಯಸ್ತ.
ಬಾನು ಬತ್ತಲೆ.
ಬೆಟ್ಟ ಬತ್ತಲೆ.
ಕೊಳವು ಬತ್ತಲೆ.
ಮೂಡದಿಕ್ಕಿನೊಡೆಯನ ಕಿರೀಟಪ್ರಭೆ
ಝಗಝಗಿಸಿ ಕುರುಡಾಡಿ
ನಟ್ಟನಡುರಾತ್ರಿಗೇ ಮಿಕಮಿಕನೆದು
ಕುಳಿತಿತು ಕೋಳಿ.
ನಿದ್ದೆ ಬರದೆದ್ದೆದ್ದು ಹೊರಳಾಡಿ
ಕೋಳಿ ಕೂಗಿತು.

ಮುನಿ ಎದ್ದ
ಮಲಗಿದ.

## THE COCK CROWS

*G. S. Siddhalingiah*

The snorting comes from the shed of celestial cows,
Ripping sleep itself, rushing forward.
The cry of the restless cock in a forest of celestial trees.
As the dagger of blood-shot eyes of passion,
Scampering from the celestial capital, *Amaravati*, to earth,
Noisy and vibrant,
Stabs, all land shivers with cold.
As white flowers embrace trees and then leak down,
The crystal-clear water of the hermitage is muddied.
Even the midnight fire if ritual shivers with cold.
The intoxicating juice rushes into the nose and eyes of the sandal
burning in ritual,
And it was quite a fracas.
Even the moon is involved in intoxication, excitement and
conspiracy.
The sky drips mucus.
Sleep is scattered helter-skelter.
The sky is nude.
The hill is nude.
The lake is nude.
The dazzle of the crown of the lord of the East, *Indra*,
Recklessly spreads,
And the cock sat up,
Waking up in the thick of night with fluttering eyes.
Unable to sleep, jumping restlessly,
The cock crowed.
The hermit woke up,
And slept.
His spouse, *Ahalya*, unable to sleep, tossed in agony.
Even the unshutting eyes were intoxicated.
The cock crowed.
Yes, but who woke up?
The cold strangled even the ritual fire of the dawn.

*Tr. K. Raghavendra Rao*

ನಿದ್ದೆ ಬರದಪಹಲ್ಯೆ ಕುರುಡಾಡಿತ್ತಲೇಃ ಹೊರಳಾಡಿದಳು.
ಬಿಡುಗಣ್ಣಿಗೂ ಅಪುಲುಗಣ್.
ಕೋಳಿ ಕೂಗಿತು.
ಸರಿಯೆ, ಎದ್ದವರಾರು?
ಛಳಿಯೆ ಚೈತ್ಯಾಗ್ನಿಗೂ ಕತ್ತು ಹಿಚುಕುತ್ತಿತ್ತು.

# ದಾಹ

ದೇವೇಂದ್ರಕುಮಾರ ಹಕಾರಿ

ಅಲ್ಲಿ, ಇಲ್ಲಿ
ಬೋರಾಡಿ ಅಳುತಿರುವ ಒಡೆದ ಎದೆ, ಬಿರಿದ ದನಿ
ತುಣುಕು ತುಣುಕು.
ಉಸಿರು ಕಟ್ಟುವ ಗೂಢ ಗಾಢ ಕತ್ತಲೆಗಳಿಗೆ

*    *    *    *

ನೆಲದ ಈ ಅಂಚಿನಲಿ, ಬೀಳುತಿವೆ
ಕೇಳುತಿವೆ, ನಿನದ, ಕೇಕೆ, ನೆನಕೆ ಲಲ್ಲೆವಾತು.
ಸೆಳೆತ, ಪಿಪಾಸೆ—
ಎಲ್ಲವನ್ನೂ ಒಮ್ಮೆ ನುಂಗುವಂಥಾ ಹಸಿವೆ
ಕೈ ಚಾಚಿದರೆ ಕಡಲು—ಕಂಡು ಚಂದ್ರನ
ವ್ಯಗ್ರಗೊಂಡಿರುವ ಒಡಲು.
ಕಡಲ ತಡಿ ಸೆಡೆಸೆಡೆದು ಕುಪ್ಪಳಿಸಿದೆ;
ತಡಿಯ ಕೊರಳಿಗೆ ಇಳೇ ಬಿದ್ದು ಜೋತಿವೆ
ಸತ್ತು ನೂರಾರು ಕೊಲ್ಲೆ.
'ಲದ್ದಾಖದಲಿ ಯುದ್ಧ !
ಯುದ್ಧವಾಡಲು ಮತ್ತೆ ಸಿದ್ಧರಾರು?'
ಎನಲು
"ನಾನು" ಎಂದಿತು ಹೊಟ್ಟೆಯಲ್ಲಿದ್ದ ಕೂಸು.

## THE THIRST

*Devendrakumar Hakari*

Here, there—
The groans of a broken heart,
The broken voice in pieces,
The secret, deep dark that chokes—to you all.

On the land's fringe, fall
And are heard shreiks of pleasant voice,
Memory, loving words, magnetic compulsion and limitless desire,
I have hunger to gulp them all at once.

Stretch the hand, and there's the sea.
The sea that has witnessed the flaming moon—
The volcano exploding with a defeaning noise.
The sea-shore rises and falls, stumbling,
While from its neck hang and swing
All round a hundred bays.

There is war in Ladakh—
Who is ready for the battle again now?
A child in the belly
Seemed to reply,
"Me."
As world's desires and their fruits gather round,
The child stares—once, stirs,
And fondles mother's breasts, pining.

*Tr. K. Raghavendra Rao*

# ವರ್ತುಲ

ಬಂದ್ದಣ್ಣ ಹಿಂಗವಿರೆ

ನಿನ್ನ ಹೊಟ್ಟೆಸೀಳಿ ಸಿಡಿದೆದ್ದ ಅಂಧಕಾಸುರ
ಕುಣಿಯುತ್ತಿದ್ದೇನೆ ಸಿಕ್ಕ ಸಿಕ್ಕತ್ತ ಬೆತ್ತಲು.
ಕೇಂದ್ರಬಿಂದುವಿನಲ್ಲಡಗಿದನನ್ಯ ಅನ್ಯಬಿಂದು ಶೋಧಿಸುವ
ಕಾತರ ಕಟ್ಟಿಕೊಂಡು ಬೆನ್ನಿಗೆ
ಈಜುತ್ತಿದ್ದೇನೆ ಮಣ್ಣಿನಾಳ.
ಒಮ್ಮೆ ಮುಳ್ಳನ್ನಂಟಿ ಜಾರಿ, ಪರಿಘದಂಚಿಲ್ಲಿ ನಿಂತು
ಹಿಡಿಯಲೆತ್ನಿಸುತ್ತೇನೆ ಹೊನ್ನಿಹುಳ.
ಎಲ್ಲೊ ಕಣ್ಣಿಟ್ಟು ನಡೆವ ಹೊತ್ತು
ಗತ್ತು ತಪ್ಪಿ, ಒಗ್ಗಾಲಿ ಬಿದ್ದು ಒರಲುತ್ತೇನೆ
ಕೇಂದ್ರ ಕಂಭ ಸಿಗದ್ದಕ್ಕೆಂದು ಜಾರಿ ಸಿಡಿಯುತ್ತೇನೆ
ದೂರ, ಘೋರ.
ತ್ರಿಕೋನ ತೀಕ್ಷ್ಣ ಶುಚಿ–ರುಚಿ ಸವೆದು
ನರಳುತ್ತೇನೆ ಶಿಲುಬೆಗೇರಿ.
ಜೀಲು ಕಳಚಿಕೊಳ್ಳುವ ಕ್ಷಣ ಜಲ್ದು ಬರಲೆಂದು
ಅಲೆಯುತ್ತೇನೆ ಅಪರಿಚಿತ ಬೀದಿ.

ಸಿದ್ಧಾರ್ಥನನು ಪ್ರಬುದ್ಧಗೊಳಿಸಿದ ಹದ್ದುಸದ್ದು-
ಗೈಯುತ್ತ ಹಾರಾಡುವವು ಅಂತರಿಕ್ಷದಲ್ಲತ್ತಿತ್ತ.
ನೆರಳ ನೆಕ್ಕಿ ತೃಪ್ತಗೊಳ್ಳುವ ಕ್ಷುಲ್ಲಕ.
ಹುಣ್ಣಿಗುಪ್ಪುಸುರಿವ ಭಲ್ಲೂಕದರಚು
ಛಿದ್ರ ವಿಚ್ಛಿದ್ರ ಕ್ಷುದ್ರನೆಂದು ಹಿಳಿದು
ಕಣ್ಮರೆಗೊಳ್ಳುವ ಬಣ್ಣದಿರುಳು.

ಖಲನಾಯಕ ಧಾವಿಸಿ ಆಯುಧ ತಿವಿಯಲಿದೆಗೆ
ರೋಷ ಕೆದರಿಕೊಂಡೆದ್ದು. ಕತ್ತಿ ಕೈಗೆ ಕೊಂಡು
ಪಿಳ್ಳೆ, ಕಾಲುಂಗರ, ಪೈಜಣ ಸಿಕ್ಕಾವೆಂದು
ಮಂಜು ಹೊಗೆ ಹೊಕ್ಕು ಹುಡುಕುವೆನು.
ಗೆಜ್ಜೆ ಸದ್ದು ಕೇಳಿ, ಬಂದತ್ತತ್ತ ಧಾವಿಸಿ
ಅರಚುತ್ತೇನೆ:

## THE CIRCLE

*Buddanna Hingmire*

The blind demon tearing out of your belly,
I dance mad all over the place, utterly naked
I swim mud-deep,
Strapping to my back the anxiety
To seek the other point concealed within the circle's centre.
Sticking to a thorn, standing on the circumference,
I struggle to catch a glow-worm.
Walking with an untargeted gaze,
I slip up, lose balance, overturn on one leg and languish.
Unable to grasp the central pillar I fall and scatter
Far in a terrible plight.
Tasting the sharp, clean tang of the triangle,
I groan self-crucified.
I roam unfamiliar streets,
Awaiting quick release from my prison.
The vultures that enlightened *Siddartha*
Now fly across the sky in tumult.
A contemptuous creature content to lick shadows,
The bear's cry fills with salt my wound.
The vanishing, colourful night
Scorns me as a trifling fragment of a fragment.
As the villain rushes and pierces,
I, roused, seize a sword
And search in the growing fog
For toe-rings and ankle-bells.
As I listen to the ankle-bells
I scream, moving hither and thither,
Planted on the shores of a roaring sea.
My feet rust,
Orbiting the spherical cage of death
Either reveal the mystery
Or just cover it up fully!

*Tr. K. Raghavendra Rao*

ಧೋ ಧೋ ಎನ್ನುವ ಸಮುದ್ರದಂಚಿಗೆ ನಿಂತು.
ಈ ಮೃತ್ಯುಪಂಜರಗೋಲ
ಸುತ್ತಿ ಸುತ್ತಿ ಜಂಗು ತಗುಲಿತು ಕಾಲಿಗೆ
ಬಿಚ್ಚಿ ತೋರಿಸು ಸೂಕ್ಷ್ಮ ಇಲ್ಲವೆ
ಮುಚ್ಚಿಕೊಳ್ಳು.

# ಅವ್ವ

ಪಿ. ಲಂಕೇಶ

ನನ್ನವ್ವ ಫಲವತ್ತಾದ ಕಪ್ಪು ನೆಲ
ಅಲ್ಲಿ ಹಸಿರು ಪತ್ರದ ಹರವು. ಬಿಳಿಯ ಹೂ ಹಬ್ಬ;
ಸುಟ್ಟಷ್ಟು ಕಸುವು. ನೊಂದಷ್ಟು ಹೂ ಹಣ್ಣು
ಮಕ್ಕಳೊದ್ದರೆ ಅವಳ ಅಂಗಾಂಗ ಪುಲಕ;
ಹೊತ್ತ ಬುಟ್ಟಿಯ ಇಟ್ಟು ನರಳಿ ಎವೆ ಮುಚ್ಚಿದಳು ತೆರೆಯದಂತೆ.

ಪಲ್ಲ ಜೋಳವ ಎತ್ತಿ ಅಪ್ಪನ್ನ ಮೆಚ್ಚಿಸಿ ತೋಳಬಂದಿಯ ಗೆದ್ದು,
ಹಂಟೆಗೊಂದು ಮೊಗೆ ನೀರು ಬಗ್ಗಿ:
ಮೆಣಸು. ಅವರೆ. ಜೋಳ. ತೊಗರಿಯ ಹೊಲವ ಕೈಯಲ್ಲಿ ಉತ್ತು:
ಹೂವಲ್ಲಿ ಹೂವಾಗಿ ಕಾಯಾಗಿ
ಹೆಸರು ಗದ್ದೆಯ ನೋಟಕೊಂಡು.
ಯೌವನವ ಕಳೆದವಳು ಚಿಂದಿಯ ಸೀರೆ ಉಟ್ಟುಕೊಂಡು.

ಸತ್ತಳು ಈಕೆ:
ಬಾಗು ಬೆನ್ನಿನ ಮುದುಕಿಗೆಷ್ಟು ಪ್ರಾಯ?
ಎಷ್ಟುಗಾದಿಯ ಚಂದ್ರ. ಒಲೆಯೆದುರು ಹೋಳಿಗೆಯ ಸಂಭ್ರಮ?
ಎಷ್ಟು ಸಲ ಈ ಮುದುಕಿ ಅತ್ತಳು
ಕಾಸಿಗೆ, ಕೆಟ್ಟ ಪೈರಿಗೆ. ಸತ್ತ ಕರುವಿಗೆ:
ಎಷ್ಟು ಸಲ ಹುಡುಕುತ್ತ ಊರೂರು ಅಲೆದಳು
ತಪ್ಪಿಸಿಕೊಂಡ ಮುದಿಯ ಎಮ್ಮೆಗೆ?

ಸತಿ ಸಾವಿತ್ರಿ, ಜಾನಕಿ ಊರ್ಮಿಳೆಯಲ್ಲ;
ಚರಿತ್ರ ಪುಸ್ತಕದ ಶಾಂತ. ಶ್ವೇತ. ಗಂಭೀರೆಯಲ್ಲ;
ಗಾಂಧೀಜಿ. ರಾಮಕೃಷ್ಣರ ಸತಿಯರಂತಲ್ಲ;
ದೇವರ ಪೂಜಿಸಲಿಲ್ಲ: ಹರಿಕತೆ ಕೇಳಲಿಲ್ಲ;
ಮುತ್ತೈದೆಯಾಗಿ ಕುಂಕುಮ ಕೂಡ ಇಡಲಿಲ್ಲ.

## MOTHER

*P. Lankesh*

My mother is fertile, black soil
There, a spread of green leaves, a festival of white flowers;
The more burnt the stronger, the more suffered more flower and fruit;
If kids kicked her, her whole body shivered in thrill;
Resting down the basket she carried on head, she closed eyes never more to open.
Heaved a whole bag of corn, pleased father, won a gold ornament,
Pouring water on ploughed up earth;
Ploughing with her own hands the fields of chilli, pulses, corn,
Become flower in flower, and fruit in fruit,
Tending the green fields,
She passed her youth, donning a torn saree.

She died:
How many years for an old woman with a bent back?
How many new year festivals, moons, how many exciting feasts at the fire-place?
How often did this old woman cry,
For money, bad crop, dead calf;
How often didn't she roam from village to village
In search of the lost, old buffalo?

No mythological paragon, no *Savitri*, *Sita* or *Urmila*, she;
No stately lady of peace, dignity, white complexion, in the history book;
No ideal wife of a Gandhiji or Ramakrishna;
Didn't worship God; didn't listen to scriptures, holy tales;
A wife with husband alive, she didn't even don the vermillion mark on fore-head.
Like the wild bear of the woods
She bore young ones,
Reared a husband, saved parsimoniously,
Like a suffering dog, cursed, snarled and fought;

ಬನದ ಕರಡಿಯ ಹಾಗೆ
ಚಿಕ್ಕಮಕ್ಕಳ ಹೊತ್ತು
ಗಂಡನ್ನ ಸಾಕಿದಳು ಕಾಸು ಗಂಟಿಕ್ಕಿದಳು
ನೊಂದ ನಾಯಿಯು ಹಾಗೆ ಬೈದು, ಗೊಣಗಿ, ಗುದ್ದಾಡಿದಳು:

ಸಣ್ಣತನ, ಕೊಂಕು, ಕೆರೆದಾಟ ಕೋತಿಯ ಹಾಗೆ:
ಎಲ್ಲಕ್ಕೆ ಮನೆತನದ ಉದ್ಧಾರ ಸೂತ್ರ.
ಈಕೆ ಉರಿದೆದ್ದಾಳು
ಮಗ ಕೆಟ್ಟರೆ, ಗಂಡ ಬೇರೆ ಕಡೆ ಹೋದಾಗ ಮಾತ್ರ.
ಬನದ ಕರಡಿಗೆ ನಿಮ್ಮ ಭಗವದ್ಗೀತೆ ಬೇಡ;
ನನ್ನವ್ವ ಬದುಕಿದ್ದು
ಕಾಳುಕಡ್ಡಿಗೆ, ದುಡಿತಕ್ಕೆ, ಮಕ್ಕಳಿಗೆ;
ಮೇಲೊಂದು ಸೂರು, ಅನ್ನ, ರೊಟ್ಟಿ, ಹಚಡಕ್ಕೆ;
ಸರೀಕರ ಎದುರು ತಲೆಯೆತ್ತಿ ನಡೆಯಲಿಕ್ಕೆ.

ಇವಳಿಗೆ ಮೆಚ್ಚುಗೆ, ಕೃತಜ್ಞತೆಯ ಕಣ್ಣೀರು :
ಹೆತ್ತದ್ದಕ್ಕೆ, ಸಾಕಿದ್ದಕ್ಕೆ; ಮಣ್ಣಲ್ಲಿ ಬದುಕಿ,
ಮನೆಯಿಂದ ಹೊಲಕ್ಕೆ ಹೋದಂತೆ
ತಣ್ಣಗೆ ಮಾತಾಡುತ್ತಲೇ ಹೊರಟುಹೋದದ್ದಕ್ಕೆ.

Smallness pugnacity and mischief of a monkey:
The leading thread uniting all, her concern for the family,
Would get madly angry
Only if a son erred or the husband went off elsewhere.

What can a wild bear of the woods do with the *Gita*?
My mother lived
For small things: grain, slaving, and children;
A small roof above, some rice, dough-cake, and a blanket;
To walk amidst peers, unbending.

Her real satisfaction, grateful tears:
For having borne, for having tended; living on earth,
For having gone coolly even while chatting
As if it was a routine trip from home to her fields.

*Tr. K. Raghavendra Rao*

# ಹೆಬ್ಬಾವು

ಸುಮತೀಂದ್ರ ನಾಡಿಗ

ಘೂರ್ಕ ಮೆಟ್ಟಿಲ ಮೇಲೆ ಕುಟ್ಟಿಹೋಗುವ ಸದು .
ಬೇಲಿಗೆ ನಿಂತ ಹಲಸಿನಮರದ ರೆಂಬೆ ಕವಲೊಡೆದಲ್ಲಿ. ಹಕ್ಕಿ ಗೂಡನ್ನಮುಕಿ
ಬೆಳೆದ ಹೆಬ್ಬಾವುಗಿಡ. ಬಳ್ಳಿಯೋ ಏನೊ. ಕೆಳಗಿಳಿದು ಬಂದು ತನ್ನೆರಡು
ವಕ್ರ ಹಲ್ಲುಗಳಿಂದ ಉಟ್ಟಿದ್ದ ಹರಿದು ಬತ್ತಲೆಗೊಳಿಸಿ ತೆಕ್ಕೆಹಾಕುವುದು.
ತಣ್ಣನೆ ಹೊಟ್ಟೆ ನುಣುಪಿದ್ದರೂ ಬಿಗಿದ ಬೆಂಕಿ. ಹೆಣಿಗೆಯ ಹಾಕಿ
ಬಿಗಿದೂ ಬಿಗಿದು ಹೊರಳಾಡಿ. ಸೋತ ನನ್ನನ್ನು ನಾಲಿಗೆ ಚಾಚಿ. ನೆಕ್ಕಿ
ಮತ್ತೆ ಮರವನ್ನು ಸುತ್ತಿಕೊಳ್ಳುವುದು.

ಮೊನ್ನೆ ಕನಸಲ್ಲಿ ತಂಗಿಯನ್ನೆಳೆದ ಹೆಬ್ಬಾವು
ನಿಧಾನ ನುಂಗುವುದ ನೋಡಿ. ಬೇಡಿ ಗದರಿಸಿ ಕಾಡಿ. ಕಡೆಗದರ
ಸೋಟೆ ತೆರೆದಲ್ಲಿ ಚೂರಿಯ ತೂರಿ ಸಿಗಿದು ತಂಗಿಯ ತೆಗೆದೆ. ಲೋಳೆಮೈ
ತೊಳೆದಾದ ಮೂರು ಗಂಟೆಯ ಮೇಲೆ. ಮೈಮುರಿದು. ಎದ್ದು ಕುಳಿತಳು
ನನ್ನ ಮುದ್ದು ತಂಗಿ.

## THE PYTHON

*Sumateendra Nadig*

The Ghoorka taps upon the steps
With his stick
Beside the fence a python—creeper which winds itself
Around a Jack, crushing the nest of a bird where
The tree branches, out
Comes down
To undress me with its CROOKED teeth and twist
Around me fast.
(The Snake-cold body has a burning hold).
Twining, tightening, rolling on
The ground, it licks me
Tired and recedes to the tree.

Yesterday
I watched the Python slowly swallowing
My sister, inch by inch. I begged, threatened
And at last thrust a knife in the corner of its mouth,
Ripped the python and had her out.

After the slimy body was washed
She came to her senses
Smiling, my sister!

*Tr. the Author*

# ಚಂದ್ರಗ್ರಹಣ

ಎಚ್. ಎಂ. ಚೆನ್ನಯ್ಯ

ಅಂದು ಪೂರ್ಣ ಚಂದ್ರಗ್ರಹಣ—ಶಿರುಗಿರಬೇಕು
ಅವನೆಡೆಗೆ ದೂರದರ್ಶಕ ಯಂತ್ರ ತಲೆಯೆತ್ತಿ—ಆ ನೆನಪು
ಚಂದ್ರನಿಗೂ ಉಳಿದಿರಬೇಕು :
ಅಪ್ಪುಗೆಯ ಸವಿಯಲ್ಲಿ ತುಡುಗು ತಿಂದದ್ದು
ಎಲ್ಲವ ಬಿಚ್ಚಿ ಕೇಳಿದ್ದು, ಬರಬಹುದು ಅಪರೆಂದು ಬೆಚ್ಚಿದ್ದು.
ನೋಡಿ, ಚಂದ್ರನ ಮುಖಕೆ ಮಸಿ ಬಳಿದ ಭೂಮಿ
ಕಿಲಕಿಲನೆ ನಕ್ಕಿರಬೇಕು.

ಒಂದು ಹೊಡೆದಾಗ, ನಾಯಿ ಚಂದ್ರನ ಕಂಡು ಬೊಗಳಿದಾಗ
ಬೆಕ್ಕು ಕೆಡವಿತು ಮಿಳ್ಳೆ. ಹೊತ್ತಾಯಿತು. ಬರಲೆ. ಬಂದಾರು—ಎಂದಾಗ
ನಿನ್ನ ಎದೆ ತುದಿಯಲ್ಲಿ ಕಣ್ಣು ಹೊಡೆದವು ತುಂಟ ತಾರೆ.
ಕರಿಮಣಿ ಸರದ ಪದಕದಲಿ ಬಿದ್ದು ಬಿದ್ದು ನಕ್ಕನು ಚಂದ್ರ;
ಗಾಳಿ ತೆವಳಿತು ಕದ್ದು.
ಕಾವೇರಿ ಶುದ್ಧ ಜಲದಿಂದ ಹೊರಬಂದು, ಅವನು,
ಒದ್ದೆ ಬಟ್ಟೆಯ ನಡುಗು ದನಿಯಲ್ಲಿ
ಪಠಿಸಿದನು ಮಂತ್ರ, ಸ್ವರ್ಗಕ್ಕೊಯ್ಯುವ ಯಂತ್ರ.
ಜಾರಿದನು ಬೆಟ್ಟದ ನಿತಂಬದಿಳುಕಲ್ಲಿ
ನಕ್ಕನು ರಾಹು ವಿಮುಕ್ತ ಚಂದ್ರ ಕೊಳದ
ತುಟಿ ನುಣುಪು ಶುಭ್ರ ಜಲದಲ್ಲಿ.
ಅವನು ಪಠಿಸಿದನು ಮಂತ್ರ—
ಹರಿಸಿದನು ಬೈರಾಗಿ ಶಿವ ಕೈಲಾಸದಲ್ಲಿ.
ಪುನಃ ಮಗುವಾಗಿ ಮಿದುಪದೆಯಲ್ಲಿ ಮುಖವಿಟ್ಟು
ಆಡಿದೆ ನಿನ್ನ ಶ್ರೋಣಿಯಿಳುಕಲ್ಲಿ
ನನ್ನೊಬ್ಬನನ್ನೆ ಮನಮುಟ್ಟಿ ಒಲಿದದ್ದೆಂದೆ. ನಾನು ಹಾಗೇ ಎಂದೆ.
ಹೊಡೆಯಿತು ಆರು. ಗುಡಿಯಲ್ಲಿ ಜಾಗಟೆಯ ಸದ್ದು
ಗ್ರಹಣದ ದೋಷ ಪರಿಹಾರಕ್ಕೆ.
ಮೂಡಿದನು ಸೂರ್ಯ ಆಕಾಶ ಭೂಮಿ ತೊಡೆ ಕೆಂಪ ಬಿಡಿಸಿ.
ನನ್ನ ನಿನ್ನ ದೇಹದಾತ್ಮದ ಬಿಗುವು ಸಡಿಲಿತು ತೆಕ್ಕೆ.

## THE LUNAR ECLIPSE

*H. M. Channaiah*

That was a lunar eclipse then—the telescope
Should have raised its head and turned towards him—
Even the moon should be remembering it:
The illicit taste of the sweetness of embrace,
The frank talk, and the fear that he would come.
Look, the earth that has smeared moon's face with ink
Must have laughed.

When it struck one, the dog barked at the moon,
The cat overturned a vessel, when it was time he came,
Impish stars winked knowingly at the tips of your breasts
And the moon laughed heartily in the necklace of black heads;
The wind slipped stealthily.

Emerging from the pure waters of *Kaveri*, he,
Shivering in wet clothes, in vibrant voice
Chanted the ritual words which would propel him to heaven,
Slipped down the curved hips of the hills,
And the moon liberated from *Rahu* smiled
The crystal clear water at the fringe of the lake.
He chanted the ritual words—
In *Kailash*, the ascetic *Shiva* blessed him.

Again turning into a child, burying the face in soft breasts,
I played on the slopes beneath,
You said I was the one you had loved with all heart, and so I said
It struck six. The bells in the temple rang,
Celebrating the release from the evil of the eclipse.
The sun rose separating the red fusion of the things of earth and sky,
The tightness of the link between our bodies and souls, relaxed.

*Tr. K. Raghavendra Rao*

## ಹಕ್ಕು

ಕೆ. ಎಸ್. ನಿಸಾರ್ ಅಹಮದ್

ನನ್ನ ಕಾಂಪೌಂಡಲ್ಲಿ ನಾನೆ ಬೆಳೆಸಿದ ತೆಂಗು
ನೋಡು ನೋಡುತ್ತಿದ್ದಂತೆ ಎತ್ತರ ಬೆಳೆದದ್ದು ಗೊತ್ತಿದ್ದರೂ
ಬಿರುಬಿಸಿಲಿನಲ್ಲೊಮ್ಮೆ ಮನೆಗೆ ಬರುವಾಗ್ಗೆ
ರಸ್ತೆಗೂ ಅದು ನೆರಳ ಚೆಲ್ಲಿದ್ದು ಅರಿವಾದದ್ದು
ಆ ನೆರಳಲ್ಲಿ ನಿಂತ ಯಾರದೋ ಕಾರು ಕಂಡಾಗಲೇ.

ಅರೆ, ಎಂದು ಒಂದು ಕ್ಷಣ ಆಶ್ಚರ್ಯಪಟ್ಟೆ.
ಆಲೋಚಿಸಿದೆ:
ನೆರಳು ನನ್ನ ಮರದ್ದು, ನಿಲ್ಲಿಸಬೇಡಯ್ಯ ಕಾರು
ಅಂದರೆ ತಪ್ಪೆ?
ಅದರ ನೆರಳಲ್ಲಿ ನಿಂತದ್ದರಿಂದ ಆ ಕಾರು
ನನ್ನದೆಂದರೆ ತಪ್ಪೆ?

ದಬಾಯಿಸಿದರೆ ಅವ ಹೀಗೆ: ಬೆಪ್ಪೆ.
ತೆಂಗು ನಿನ್ನದಿರಬಹುದು, ಅದರ ನೆರಳು ನಿನ್ನದ?
ದಿನಬೆಳಗಾದರೆ ಗರಿಗಳಲ್ಲಿ ಅರಳುವ ಹಕ್ಕಿ ನಿನ್ನದ?
ಅವರ ಕಿಚಪಿಚ, ಅಲೆಯುವ ಹವೆ, ಹೊಳೆಯುವ ಕಿರಣ,
ತೂಗುವ ಚಂದ್ರ—ನಿನ್ನದ?

ಇದು ಸಾರ್ವಜನಿಕ ರಸ್ತೆ—ನಿಲ್ಲಿಸಲು.
ಅಲ್ಲಿ ಚೆಲ್ಲಿದ ನೆರಳೂ ನನ್ನದೆನ್ನಲು, ಹಕ್ಕುಂಟು.
ಅಲ್ಲದೆ, ನೆರಳ ನೆಪದಿಂದ ವಾಹನ ನಿಲ್ಲುತ್ತೆ,
ಹಾಗಾಗಿ ಸಂಚಾರಕ್ಕೆ ಅಡಚಣೆ, ಕತ್ತರಿಸು
ಮರವನೆಂದರೆ ಎಲ್ಲಿದೆ ನನ್ನಲ್ಲಿ ಜವಾಬು?

ಕ್ಷಣ ದಿಗಿಲಾಗಿ
ಕಾರಲ್ಲಿ ಯಾರೂ ಇಲ್ಲದ್ದು ಖುಷಿಯಾಗಿ
ನೆರಳ ನೋಡದೆ
ಬರೀ ಕಾಂಪೌಂಡವ ಮೆಚ್ಚುತ್ತ ಸರಸರ ಒಳಗೆ ನಡೆದೆ.

## RIGHTS

*K. S. Nissar Ahmed*

I knew the Coconut plant
—I'd planted it myself—
Had grown up under my very eyes.
Never had I imagined
Its shade spreading over the road
Until I saw somebody's car
Parked there.

I was surprised at first.
Then I thought:
What if I tell him
He mustn't park his car there?
Now that he has parked it
The car is mine
Because the shade
Is of my tree.
And if I took him to task
He would surely reply:
"You're a fool. The tree
Might be yours. But is
Its shade? Are the blossoming birds
On its branches, their chirpings,
The sporting winds, glittering rays
And the suspended moon—
Are they all yours?

"This is a public road—
I have every right
To park my car here
And call the shade mine
If it is there.
Moreover, the car stops here
On the pretext of the shade

And traffic is hindered.
If I therefore ask
That you have the tree
Felled, what then is your reply?"

I got afraid
for a moment
And realised there was
No one in the car.
Without looking at the shade
I hurried on
Appreciating the beauty of the car.

*Tr. H. S. Shivaprakash*

# ಕಲೆ

ಕೆ. ಎಸ್. ನಿಸಾರ್ ಅಹಮದ್

ಕಣ್ಮಿಟುಕು, ಸಿಳ್ಳು, ಬೆಲ್ಲಿಗೆ
ಟೈಟ್ ಪ್ಯಾಂಟು ಟೈ,
ಮೀಸೆ ಕೆಳಗಿನ ಲಫಂಗ ಜೊಲ್ಲಿಗೆ,
ಹಗಲು ಹೊಸ್ತಿಲಿನ ಹೊಚ್ಚಹೊಸ ಬಿಳಿ ಹಲ್ಲು
ರಾತ್ರಿ ಸತಿಸಾವಿತ್ರಿತನದ ಪತಿಕಾಲೊತ್ತು,
ದೇಶಾವರಿಯು ಮಾಸಲು ಮುತ್ತು

ಅಲ್ಲ ಕಲೆ

ಸದ್ಗೃಹಸ್ಥೆಯು ಸೊಕ್ಕು;
ಬೀದಿಬಸವಿತನಕ್ಕೆ ಬಾಗಿಲಿಕ್ಕು.

ನಟ್ಟಿರುಳ ಕಾಮುಕತೆ
ಗೆದುರಾದ ಹಳಸು ನಗೆ,
ಗುಳಿಗಣ್ಣಿನೊಂದು ಜತೆ
ದಳ್ಳಾಳಿ ಕಸುಬಲ್ಲ ಕಲೆ

ಗಗನ ಪರಿಚಾರಿಕೆ
ಪ್ರೇಮದಭಿಸಾರಿಕೆಯು ಕೋರಿಕೆ.

ಹತ್ತು ಕೈ ಬದಲಿದರು ಮಾಸಿದರು
ಅಷ್ಟಿಷ್ಟು ಹರಿದರೂ ಅದೇ ಬೆಲೆ
ಕರೆನ್ಸಿ ನೋಟು ಕಲೆ.

## ART

*K. S. Nissar Ahmed*

A wink, a whistle,
Tight trousers and tie
Tuned to the bell
Watering mouth
Below the moustache
Clear, white teeth
At day's threshold,
Pressing husband's legs
Casual, fading kisses

Isn't art,

A noble house-wife's pride?
Close the doors. Keep vamps outside.

Sensuality in the dead of night
Set against a stale smile
A pair of sunken eyes
And a pimp's craftiness

Isn't
Art,

An air-hostess's,
A courtesan's
Cordial plea?

Though it changes hands freely,
And fades,
Though torn a little,
It stays the same, of the same value,
—that's art, a currency note.

*Tr. H. S. Shivaprakash*

# ನಮ್ಮಜ್ಜ

ಚಂದ್ರಶೇಖರ ಕಂಬಾರ

ಹಸಿರು ಕೈಕೊಟ್ಟ ವಟವೃಕ್ಷ ನಮ್ಮಜ್ಜ
ಮುಂದೆ ಅಂಗಳ ತುಂಬ, ಹಿಂದೆ ಹಿತ್ತಲ ತುಂಬ
ಮೈಕೈ ನೆರಳ ಚೆಲ್ಲಿ ಕೂರುತ್ತಾನೆ.

ಬಲಿತ ಗಾಯದ ರೆಕ್ಕೆ ಬಲಿಯಲಾರದ ಹಕ್ಕಿ
ಅಲ್ಲಿ ಟೊಂಗೆಯ ಮೇಲೆ ಇಲ್ಲಿ ಬಿಸಿಲಿನ ಮೇಲೆ
ಹಾ ನರಳಿ ಕಿರುಚುತ್ತವೆ.

ಏನಿಲ್ಲವೆಂದರೂ ಮೂರು ಬಾಣಂತಿಯರ ಸುಡಬಹುದಾದ
ಟೊಂಗೆ ಟೊಂಗೆಯ ತುಂಬ. ಪಂಚಮಿಯ ಜೋಕಾಲಿ
ತೂಗಿ ನಗಿಯೆಳೆಸೋಗೆ ಕುಕಿಲುತ್ತವೆ.
ಅರ್ಥವಾಗದ ವಿಧಿಯ ಹಾಗೆ ಇವ ನಕ್ಕಾಗ
ಉತ್ತರವೆ ಗೊತ್ತಿರದ ಬೆರಳ ಮೂಗಿನ ಧಡ್ಡ ಮಗು
ತೊದಲುತ್ತದೆ.
ಯಾ ಕೀಟವಾದರೂ ಭ್ರಮರವಾಗದೆ ದಾಟಿ ಬರದ ಬೇಲಿ !

ನಾ ಬಲ್ಲೆ.—ಇವನ ತಿಥಿ ಎಂದೊ ಮಾಡಿದ್ದೇನೆ.
ನೀರು ಬಿಟ್ಟಿದ್ದೇನೆ,
ಹಳೆಗನ್ನಡ ಅಥವಾ ವಿಶ್ವಕೋಶದಲ್ಲಿವನ ಕಂಡಿದ್ದೇನೆ.
ಅದಕ್ಕೇ ನಾನೆಂದೂ ಹೋಗ-
ಲಾರದ ಬಾರದ ಕೂಡದ
ದೇಶದಲ್ಲವನಿದ್ದಂತೆ ಕಲ್ಪಿಸಿ ಮನೆ ಹೊಕ್ಕರೆ. ಅರೆ
ಹಿತ್ತಲದ ಹಳೆಬಾವಿಯೊಳಗೆಲ್ಲ ಬೇರುಗಳು.
ಕೆಳಗೆ ನೀರಿನ ತುಂಬ ಹಸಿರುಬಿಂಬ !

ಮೈತುಂಬಾ ಕೂದಲುಂಟು ಕಪಿಯಲ್ಲದ.
ಕಪ್ಪಗುಂಟು ಕರಡಿಯಲ್ಲದ,

## MY GRANDFATHER

*Chandrasekhara Kambar*

My grandfather is a buniyan tree,
A source of green strength,
He spreads the shadow of his limb and body,
Covering the front-yard and the backyard,
Squatting smugly.

With suppurating wounds, and with unfledged wings,
Some on branches, some on twigs,
The little birds groan in agony.

From branches that could provide easily
Funeral pyre for three pregnant women
The young, gay peacocks swing their
*Panchami* swing,
And screech in mad joy.

When he laughs the mystifying laughter of Fate,
The wonder-struck child, answerless,
Mumbles.
He is the watchful fence
Past which no insect can metamorphose into a bee.

Yes, I know—I have performed his death anniversary long ago,
Have offered him the releasing water,
Have encountered him in old Kannada or some encyclopaedia,
Which is why, imagining him
To inhabit a land I can never reach,
And perhaps never ought to reach,
I made my entry into the house,
But, God, I find the old well in the backyard bristle with his roots
And below in the water, green reflections!

ಥೇಟು ಮಾನವರಂತೆ—ಖಂಡಿತಾ ನಾ
ನೀ ಅಲ್ಲದ ಪಶುವ ತಂದು
ಥೂ ಉಗುಳಿ. ಥೂಬಿಟ್ಟು.
ಪೋಜು ಮಾಡಿ ಖಬ್ಬಖಬ್ಬಾ ಖಳ ನಕ್ಕಿದ್ದೇನೆ: ಅಥವಾ
ಹಸುಳೆಗಳ ಬಾಯ್ತುಂಬ ಬಾಂಬು ಘೋಷಣೆ ತುಂಬಿ.
ಬೆಂಕೀ ಹಚ್ಚಿ ಉಸಿರ ಛಟಪಟಿಸಿ ಪಟಾಕಿಸಗೆ ನಕ್ಕಿದ್ದೇನೆ: ಅಥವಾ
ಸುಳ್ಳೇಕೆ? ಮನೆಯಲ್ಲೆ ಮಾದರಿ ಗೋರಿಯನ್ನಗೆದು
ತರತರದಂಗಿಗಳಿಂದ ಶೃಂಗರಿಸಿ.
ನಾನಾ ನಮೂನೆ ಭಂಗಿಗಳಲ್ಲಿ. (ಅವನ ಭಂಗಿಯಲಿ ಸಹ)
ಮಲಗಿ ಅಣಕಿಸಿ ನಕ್ಕಿದ್ದೇನೆ. ಆದರೂ
ಅವನೊಮ್ಮೆಯೂ
ತಪ್ಪಿಯೂ
ಮರೆತು ಸಹ ಕನಿಷ್ಟಪಕ್ಷ ಅಳಲಿಲ್ಲ.
ಕಬ್ಬಿಣದ ಭಾವಭಂಗಿಗಳ ಬದಲಿಸಲಿಲ್ಲ. ಅಥವಾ . . .

Hirsuitae but not a monkey,
Black but not a bear,
It was literally like a human—
Well, I have brought this animal,
Spat and let him loose against the old man,
And, watching the fun, have heartily laughed.

Or loading the mouths of the young with slogan-bombs,
Set fire to the crackers of greenness,
And laughed like the crackers!
Or, well, why lie? Digging a model grave in the house,
Bedecking with all sorts of colourful shirts,
And setting myself in all kinds of poses (including his own)
And, lying him low, I have laughed.

And yet, not even once,
Even by mistake,
Did the old fellow cry the least.

Didn't alter his steelframed gestures and poses.

Or . . . . . . . .

*Tr. K. Raghavendra Rao*

# ಹೋರಿ

ಚಂದ್ರಶೇಖರ ಕಂಬಾರ

1

ಕಟ್ಟಿರುವ ಕಣ್ಣಿ ಹರಕೊಂಡು ಥುರಕೀ ಹೊಡೆದು
ಹಿಡಿಯ ಬಂದಣ್ಣಗಳ ಕೊಸರಿ ಕೈಮೀರಿ,
ಉದ್ಗಾರ ಕೊರೆ ಬೇಲಿ ಹಾರಿ ಹೋ ಹೋ
ಬಂತು ಹಂಡ ಹೋರಿ.
ಮುಸಮುಸನೆ ಮುಸಮುಸನೆ ತೇಗುವುದು,
ಕಿಸಮೂಗಿಂದ ಬಸಿಯುವುದು ಸೊಕ್ಕು.—ಹುಣ್ಣಿಮೆಯ
ಜೇನುಹುಟ್ಟಿನ ತೊಟಕು ತೊಟಕು.
ಮಡುಗೊಂಡ ಗಾಳಿಯನು ಬೀಸುಕಿವಿಗಳ ಚಾಚಿ
ಎದುರು ಈಸುವ ಹಮ್ಮು.
ಮುಂದೆ ಬಂದವರ ತುಟಿ ಕಂಟಕ್ಕೆ ಬಾಯಿಕ್ಕಿ
ಇಡಿಯ ಕೊಡವನ್ನೆಲ್ಲ ಬರಿದು ಮಾಡುವ ಆಸೆ.
ಬೆಂಕಿಮೈ—ಮೈತುಂಬ ಬಾಯಿ. ಸಿಕ್ಕಷ್ಟನ್ನು
ಸಿಕ್ಕಲ್ಲಿ, ಗಪಗಪಾ ತಿಂಬಾಸೆ.
ದೃಷ್ಟಿ ಕಡಗೋಲಿಂದ ದಿಕ್ಕ ಕಡೆಯುವ ಮೋಡಿ
ಕರಣಗಳ ಕಳವಳಕೆ ಕಾಲ ಕೆದರುತ್ತಲಿದೆ
ಎದ್ದು ಧೂಳಲಿ ನಾನು ನೀನು ಯಾರೊ!
ಇಣಿಯಲುಗಿ ಬೆನ್ನಹುರಿಯುಬ್ಬಿನಲಿ ಒಡಮುರಿತ:
ಒಳಗೆ ಗಲ್ಭಸ್ತ್ರೀಮು. ತಿರುಗಣಿಯ ಮಡು ಸುತ್ತಿ
ತೊಡೆಯ ನಾಡಿಯ ಬೇರ ಕೀಳಲೆಳಸುವುದು.
ಮತಮತ್ತ ಬೆರಳ ತುದಿಯಲ್ಲಿ ಮುಡಿಯನು ಮುಟ್ಟಿ
ಸಲಕೊಮ್ಮೆ ಒಡಪನಾಡುವ ಎಲಗ ಏ ಬಾಲಿ,
ಮುನ್ನೋಡೆ ಸರಿ ಅತ್ತ; ಇಲದಿರಕ
ತುಟಿ ಕೆನ್ನೆಯಲಿ ಬೆಳೆದ ಚೆಂಗುಲಾಬಿಗಳನ್ನು
ಜತನವಾಗಿಟ್ಟುಕೋ ಜ್ವಾಕಿ!

2

ಒಂದೆ ಬಳಿಯಲ್ಲೀಗ ಏಳು ಬಣ್ಣದ ಸೃಷ್ಟಿ.
ಹಳೆಹಸಿರು ಫಡಕಿಯನು ಹಚ್ಚಿಕೊಂಡಿದೆ ಬಿಡೋ ಭೂಮಿ.

## THE BULL

*Chandrasekhara Kambar*

I

Tearing asunder the rein of rope, snorting heavily,
Pushing aside those restraining it, getting out of hand,
Indifferent to spectators' cries, jumping the fence,
It comes, the wild bull.
It belches fiercely,
From its widened snout oozes haughtiness,—drops
From moonlight's beehive.
The confidence to swim, straightening fan-like ears,
The pool of wind.
The thirst to empty off the pot
By sucking from the lip-fringes whoever is in its way.
A body of fire—body all mouth, a wild hunger
To consume whatever is available wherever in gulps.
The wizardry of churning with sight the corners of space,
Digs with its feet the senses in turmoil,
Kicking up dust that obliterates distinctions between objects!
The hump tilting, the swollen ropes of the backbone burst;
Within a Gulf Stream, whose whirlpool waters
Wrench the roots of nerves in the thigh.
Hey! You, girl, smoothing your hair with fingers frequently,
And talking in riddles, watch out, and leave way;
Otherwise take care of the lovely roses
Grown on your cheeks and lips!

II

Out of the single white are created seven colours.
Earth has donned the faded dust of green anyway,
What could be seen through the tears is white skin!
How red was the sky!
The toddy in the Ghats spilled, fragmented,
Leaked into a river; on the bank

ಹರಕಿನಲಿ ಕಂಡದ್ದು ಬಿಳಿಯ ತೊಗಲು!
ಆಕಾಶಕಾದರೂ ಎಂಥ ಕೆಂಪು!
ಘಟ್ಟದಲ್ಲಿನ ಭಟ್ಟಿಸೆರೆ ಹರಿವಿ ತೂತಾಗಿ
ಸೋರಿ ಒಸರುತ್ತಲಿದೆ ಹೊಳೆಯಾಗಿ; ದಂಡೆಯಲಿ
ತೆರೆಸಿರಿಯನೊದ್ದಾಡಿ ದೀಡಿಯಾಡುವ ಮುರುಕ.
ಈ ಗಾಳಿ, ಹೂವ ಹುಡಿಯಲ್ಲಿ ಹುಡದಿಯನಾಡಿ
ಬಿದಿರ ಹರೆ ಹದಿನೆಂಟರಲ್ಲಿ ಕಚಗುಳಿಯಿಟ್ಟು
ಹಾಕುವುದು ಗವಿಯೊಳಗೆ ಸಿಳ್ಳು. ತುಡುಗು ಸಂಕೇತ.
ಯಾಸಿ ಕಣ್ಣಿನ ಹಾಗೆ ಬೇಲಿಯಲಿ ಹೂ ಚಿಗುರು.
ಮುಗ್ಗಿ ತಗಿಸಿದ ಕುಬಸ ಬಳ್ಳಿ.
ಕಂಡ ಹೆಣ್ಣಿನ ಕತೆಗೆ ನಾನೆ ನಾಯಕನೀಗ
ಸೀರೆಯುಟ್ಟದ್ದೆಲ್ಲ ಜೀವಂತ ಉದ್ರೇಕ.
ಹಸುರು ಐಸಿರಿಯಿಂದ ಮೂರ್ಛೆಹೋಗುವ ಹಳದಿ
ಹೇಳು, 'ಚೆಲುವನು ಸಿಕ್ಕಿ
ನನಗೆ ಮದುವೆಯೆಂದು?'
ಬಿಸಿಯೆಂಬುದುಂಟೆಂದು ನನಗೆ ಗೊತ್ತಾದದ್ದೆ ಈಗ
ಇದೆ ಮೊದಲ ಸಲ.
ಸಸಿಯು ಒಳಗಡೆ ಹೂತ ಚಿಗುರು.
ಚೈತ್ರಗಳ ಆರೈಕೆಯಲ್ಲಿ ಆಗಲಿ ಬೆಳೆದು
ಹೊಳೆಯ ದಂಡೆಯು ಕರಿಕಿಯಾಗಿ ಆವರಿಸಿತೋ
ಇದ್ದ ಬಿದ್ದಿರುವೆಲ್ಲ ಅವಕಾಶವ.
ಮೀಸಲದ ಬಯಕೆಯಲಿ ಬಾಯಿ ಬಿಟ್ಟಿದೆ ಭೂಮಿ.
ತನ್ನ ಅಸ್ತಿತ್ವಕ್ಕೆ ಸಾರ್ಥಕತೆ ಬರುವ ಕ್ಷಣ,
ಮೋಡ ತೊಡೆಯಾಳದಲಿ ಮಿಂಚಿನಾಟ.
ಸಾವುಗಳ ಸತ್ತ ಬೆರಗಿನಲಿ ಹಸುರಿನನಂತ
ಲೀಲೆಯಿದು ಹುಡುಗಿ ಬಾ ಒಡೆದೆನೊಡಪ!

The play of waves being disrupted in their neat folds.
Playing in the belly of the flower,
Tickling the straight bamboo of eighteen years of youth,
This wind whistles in the cave relaying a code of mischief.
The shoots and flowers on the fence are slanting eyes.
The creeper studded with buds is the blouse.
I am the hero of the tale of every girl I espy,
And whatever is wrapped in a saree disturbs me to the roots of
my life.
The yellow swooning at the overwhelming wealth of green, tell me,
'When shall I capture beauty,
When shall I wed?'

III

This was the first time now
I was aware of the existence of heat.
The shoot buried in the plant,
Already grown in the desires of springs,
Spread as grass on the river bank,
Availing of every opportunity.
The earth gapes with an elect desire.
The moment that inherits its wealth,
The game of lightning deep down cloud's thighs.
The limitless green amazed at the dying of deaths,
This is play, girl, come, I have unriddled you!

*Tr. K. Raghavendra Rao*

# ಪ್ರೇಯಸೀವಲ್ಲಭನಿಗೊಂದಿಷ್ಟುಪದೇಶ

ಚಂದ್ರಶೇಖರ ಪಾಟೀಲ

ಗೆಳೆಯ. ಬರೆದಿಟ್ಟುಕೋ ಈ ನಾಲ್ಕು ಮಾತ.
ನಾಲ್ಕು ಅಂದರೆ ನಾಲ್ಕೆ. ಮತ್ತೊಂದ ಕೆಮ್ಮಿದರೆ
ನನ್ನಾಣೆ, ನಿನ್ನಾಣೆ. ನಿನ್ನ ಜೊತೆ ಫೋಟೋದ
ಒಳಗೆ ನಾಚುತ ನಿಂತ ನಿನ್ನವಳ ಕೊರಳಾಣೆ.

ಒಂದು: ಏಕಾಏಕಿ ಬಾಗಿಲ ಬಳಿಗೆ ಬಂದ
ನಿನ್ನನ್ನವಳು ಕಂಡು ಗಡಬಡಿಸಿ ತಲೆಸೆರಗ
ಹೊದ್ದು. ತುಟಿ ಓಂಚಿ. ನಗೆ ಹೊರದೂಡಿದಾಗ
ನಿನಗೇನೆ ಪ್ರತ್ಯೇಕ ಅದು. ಅಂತ ತಿಳಿದುಕೋ.

ಎರಡು: ನಿನ್ನಪ್ಪುಗೆಯ ಅಮಲು ಕಣ್ಣಿಗೆ ಏರಿ
ತೊಡೆ ನಡುಗಿ. ಅವಳು ಏನೇನೋ ಬಡಬಡಿಸಿದರೆ
ಸುಳ್ಳೆ ಘಾಬರಿಯಾಗಿ ಉಡುಗದಿರು. ಕನಸಿನಲ್ಲಿ
ದೆವ್ವ ಕಂಡಿರಬಹುದು ಎಂದಿಷ್ಟೆ ಊಹಿಸಿಕೊ.

ಮೂರು: ಗೊತ್ತೇ ನಿನಗೆ ಭವಸಾಗರದ ಪರಿಯು?
ಮೇಲುಮೇಲೇ ಈಸು. ಜೈಸು. ಮಜಮಜ ಮಾಡು.
ನೆಲೆ ತರುವೆನೆಂದು ತಳ ಕಾಣದಿರು. ಅಲ್ಲಿದ್ದ-
ದನು ಕಂಡು ಹೆಣವಾಗಿ ಮೇಲೆ ಬಂದೀ. ಜೋಕೆ.

ನಾಲ್ಕು: ನನ್ನಂಥವರು ನಿನ್ನಂಥವರ ಕುರಿತು
ಕೊರೆದ ಖಾಲೀ ಮಾತು ಕೇಳದಿರು. ತಮ್ಮಣ್ಣ.
ನಿನಗೆ, ಅಂಗಡಿ ಬೆಲ್ಲ—ಮನೆಗೆ ಮೀಸಲು ಎಂಬ
ಮಾತು ಗೊತ್ತೆ? ಸಾಕು. ಮುತ್ತಿನಂಥಾ ಮಾತು !

## ADVICE GIVEN TO THE HUSBAND OF MY SWEET HEART

*Chandrasekhar Patil*

Friend, jot down these four points.
Just four—not a word more.
I swear by my god,
And by your goddess
Who smiles so shyly
In your wedding-album.

One: suppose you come
Back home at an odd hour and she,
Embarrassed, stretches her lips
And gives you a smile.
Jot down that that smile
Is specially prepared for you.

Two: when her thighs shudder
In your nightly entanglement,
She might, eyes half-closed,
Mutter some silly syllables. Ignore them.
Must be seeing some ghost
In her dream. That's all.

Three: Life's like a sea, you see.
Swim near the shore. Swim in the foam.
Don't try to dive to the depth. If you do,
You may never come up again, you see.

Four: don't bother about prattlers like me.
Plug your ears with cotton, brother,
And lead a long and happy married life
For years—and years, brother.

*Tr. the Author*

# ಕಾಮುಕಸ್ತೂರಿ

ಚಂದ್ರಶೇಖರ ಪಾಟೀಲ

ಕಣ್ಣಿನಲಿ ಪಿಸುಮಾತ ಕೇಳಿದೆವು. ಬಂದೆವು
    ನಿಮಿಷನಿಮಿಷಕೆ ಬಹಳ ಸಮಿಸಮೀಪ.
ಮೈ ನಡುಗಿ ಹೊರಬಿದ್ದು ಹವೆಯಲ್ಲಿ ಹರಿದಂಥ
    ಉಸಿರ ತೆರೆಯಂಚಿಗೂ ಒಲುಮೆಲೇಪ.

ಗಲ್ಲ–ತುಟಿ–ಕಂಗಳಲಿ ಕನಸುಗಳ ಬಿರಿತ.
    ಎದೆಯು ಗವಿಯಲ್ಲೆಲ್ಲೊ ಕವನಸಾಲು.
ತಲೆತುಂಬ ಮೋಡಗಳು. ಆ ಮೋಡಗಳ ಮೇಲೆ
    ಸವ್ವಾರಿ ಹೊರಟೆವು : ನಾನು–ನೀನು.

ಮೋಡ ಇಳಿದವು ಇಳೆಗೆ ಮಳೆಯಾಗಿ. ಹೊಳೆಯಾಗಿ
    ಹರಿದುಹೋಯಿತು ನೀರು ಎತ್ತ ಕಡೆಗೋ.
ನೆಲದ ದಾರಿಯು ತುಳಿದು ನಮಗೆ ರೂಢಿಯೆ ಇಲ್ಲ.
    ಹೌದು, ಅಗಲಲೆಬೇಕು ನಾವು ಈಗ.

ಹೋಗಿ ಬಾ. ಆಗೀಗ ಗಾಳಿಯಲಿ ಮೆಲ್ಲಗೇ
ಪಿಸುಗುಟ್ಟು, ಕೇಳುವೆನು ನಾ.
ನೀ ಮುಡಿದ ಕಾಮುಕಸ್ತೂರಿ ಎಲೆ ಇಲ್ಲಿ ತಾ.
    ನನ್ನ ಪುಸ್ತಕದೊಳಗೆ ಮುಚ್ಚಿಕೊಳುವೆ.

## JASMINE IN THE HAIR

*Chandrasekhar Patil*

Whispers in the eyes.
And suppressed sighs
Thrilled the air and
We loved.

Dreams blooming in cheeks and lips.
Poems echoing in the cave.
Clouds floating in the eyes and
We rode the clouds.

It rained.
And it had to rain. And the water
Rushed to the sea.
We were left on the earth
With our slender
Feet too tender
For the earth. So

Good-bye.
Let's fly
Into each other's past.
Give me the jasmine you wear
In the hair.

I'll hide it
Between
The whispers of my poems.

*Tr. the Author*

# ಮರಿಲಿನ್ ಮನ್ರೊ

ಗಿರಡ್ಡಿ ಗೋವಿಂದರಾಜ

1

ಇವಳಿಗೇನಾಗಿತ್ತಪ್ಪ ಧಾಡಿ?
ಕಣ್ಣ ಪಾಶಗಳಲ್ಲೆ ನೂರು ತರುಣರ ಕಟ್ಟಿ ಎಳೆತಂದು
ಕಾಲಡಿ ಕೆಡವಿ ಜೊಲ್ಲು ಸೋರಿಸುವ ರೂಪವಿತ್ತು.
ಚೆಂಡು–ಮೊಲೆಗಳ ಕುಡಿಯನೊತ್ತಿದರೆ ಚಿಲ್ಲೆನ್ನುವ
ಭರ್ತಿ ಪ್ರಾಯ.
ಇಂದ್ರನಮರಾವತಿಯ ಭೋಗಭಾಗ್ಯಗಳನ್ನು ಧಿಃಗಳೆವ ಸಂಪತ್ತು.
ಕೀರ್ತಿಯೋ,
ಶ್ರಾವಣದ ಹಸಿರಲ್ಲಿ ಹೊಂಬಿಸಿಲ ಗತ್ತು.
ಆದರೂ ಬದುಕಬರಲಿಲ್ಲ ಈ ಹುಡಿಗೆಗೆ.
ಏನೇನೋ ಹಸಿಗನಸ ತಲೆತುಂಬ ತುಂಬಿ
ಯಾವ ವ್ಯಗ್ರತೆಯೊ, ಯಾವ ಉನ್ಮಾದವೋ
ನರನರದಲ್ಲು ಸೇರಿ ಒತ್ತರದಿಂದ ಹರಿದಾಡಿದಂಥ ಕ್ಷಣ
ತಟ್ಟನೇ ಸಾವನ್ನಪ್ಪಿದಳು ಇವಳು.
ಬದುಕಿನಲ್ಲಿ ಬರಿ ಉಗಾದಿಗಳ ಬಯಸಿದಳು.
ಬೇವು–ಬೆಲ್ಲದ ರುಚಿಯು ನೋಡುವುದ ಮರೆತಳು.
ಇವಳು ಪಲಾಯನವಾದಿ,
ನಗ್ನಸತ್ಯದ ಪ್ರಖರ ತೇಜ ಸಹಿಸದೆ
ಕಣ್ಣ ಮುಚ್ಚಿದಳು.

2

ಎಷ್ಟು ದಿನ ಹಾಗೆಯೇ ತೆರೆದು ನಗೆಯ ತುಳುಕಿಸಲಿ
ನಾ ತೊಟ್ಟ ಬಣ್ಣಗಳ ಮುಖವಾಡವಲ್ಲಿ?
ಹುಟ್ಟುವಾಗಲೆ ಜೊತೆಗೆ ತಂದಿದ್ದ ಒಂಟಿತನ
ಬೆಳೆದದ್ದು ಸಯಾಮೀ ಅವಳಿ ಮಕ್ಕಳಂತೆ.
ಆ ಮೇಲೆ
ನವುರಾಗಿ ಬಿರಿದಿತ್ತು ಮುಗುಳುಹರಯ:

## MARYLIN MONROE

*Giraddi Govindaraja*

### I

What the devil was the matter with her anyway?
Had beauty enough to lasso hundred young men with her eyes' ropes
And huddle them at her feet salivating.
The full youth bursting
If you press the teats of her ball-breasts.
Wealth enough to shame the pageant and pomp of *Amaravati*, the celestial capital of *Indra*.
As for fame,
Scattered like Spring's green touched with sun's gold.
Yet she didn't know how to manage her life, this girl.
She suddenly embraced death the moment
When some obsession, some madness,
Packing her head with all sorts of raw dreams,
Permeating every nerve, ran forcefully.
Wanted life to be one gay holiday,
Forgot to taste the juice of bitter neem and sweet jaggery together.
She, an escapist,
Blinded by the fierce light of naked truth,
She closed her eyes.

### II

How many days, oh, how many days should I scatter smiles
With the multi-coloured mask on my face?
With me was born loneliness.
We both grew like the siamese twins.
And then
The bud of my youth opened out gently:
Flowed to the brim life's juice in every petal,
Colourful dreams of figures and pictures
Awaited eagerly to ripen into fruits.

ಪಕಳಿ ಪಕಳಿಯು ತುಂಬ ಹರಿದಿತ್ತು ಜೀವರಸ,
ಚಿತ್ರ ಚಿತ್ತಾರಗಳ ಬಣ್ಣ ಬಣ್ಣದ ಕನಸು
ಹಣ್ಣಾಗಲೀ ಎಂದು ಹಾತೊರೆದವು.
ಅಹ, ಸಾಗರ ತುಂಬ ಹಾಯಿ ಬಿಚ್ಚಿದ ಹಡಗು.
ಬಂತು ತೆರೆತೆರೆಯಾಗಿ, ನುಗ್ಗಿ ನೊರೆನೊರೆಯಾಗಿ
ಯೌವನದ ಊಳಿಗದ ಆಸೆಗಳ ದಂಡು.
ಸಾಗಿತ್ತು ದಿಗ್ವಿಜಯು, ಗೆದ್ದೆ ನೂರಾರು
ಲೌಕಿಕ ಯುದ್ಧಗಳ.
ಸುಲಿದು ಒಟ್ಟಿದೆ ಮೈಯು ಸುಖದ ಬೊಕ್ಕಸವನ್ನು.
ಒಳಗೊಳಗೆ ಪಟ್ಟೈಸಿತ್ತು ಸಂಜೆನೆರಳು.
ಬೆಚ್ಚಿ ಎಚ್ಚೆತ್ತು ದೃಷ್ಟಿಯಾಡಿಸಿದಾಗ;
ಸುತ್ತು ಹಸಿರುನೆಲದಂಚೇ ಇರದ ಅಲ್ಲೋಲ ಕಲ್ಲೋಲ ಉಪ್ಪುನೀರು.

ಆಹ, ತುಂಬು ಕಡಲಿನ ನಡುವೆ ಬಾಯಾರಿಕೆ.
ಸಾಗಿದಷ್ಟೂ ದಿವಸ ಸಾಗಲೆಂದೆ.
ದಿವಸದಂತೆಯೆ ದಿವಸ,
ರಾತ್ರಿಯಂತೆಯೆ ರಾತ್ರಿ,
ದಿವಸದಂತೆಯೆ ದಿವಸ . . . .
ಎಷ್ಟು ದಿವಸ?
ಗಿಂವ್ವೆಂದು ತಿರುತಿರುಗಿ ಕಿವಿಯು ಕೊರೆಯುವ ಚಕ್ರ.
ಕುಂತಾಗ, ನಿಂತಾಗ, ನಿದ್ದೆ, ಮೈಥುನದಲ್ಲೂ
ಒಂದೆ ಪ್ರಶ್ನೆ:
ಯಾವ ಅರ್ಥವ ತಂದು ತುಂಬಲೀ ಶೂನ್ಯಕ್ಕೆ?
ಒಡಪು ಒಡೆಯಲಿ ಬೇಕು, ಇಲ್ಲದಿದ್ದರೆ ಸಿಗದು
ಯಕ್ಷ ಕಾವಲಿಗಿರುವ ಈ ಕೊಳದ ಪ್ರಾಣಜಲ.
ನಾನಾದರೋ ಹುಡಿಗಿ
ಒಳಗೆ ಕಾಣುವ ಮಿಂಚುದೀಪಕ್ಕೆ ಎದೆ ತುಡಿದು
ಕಿಟಿಕಿ ಗಾಜಿಗೆ ಚಚ್ಚಿ ಚಚ್ಚಿ ತಲೆಯೊಡೆದೆ.
ಆ ಗಾಯ ಕೀವಾಗಿ, ಕೊಳೆತು, ಬಾತು.
ಅಬ್ಬಬ್ಬ ಗಬ್ಬುನಾತ !
ಯಾವ ವನಸ್ಪತಿಗುಂಟೋ ಮಾಯಿಸುವ ಶಕ್ತಿ !
ಅಥವ ಅಂಥ ಗಿಡ ಹುಟ್ಟಿದೆಯೊ ಇಲ್ಲವೊ !
ಯಾಕೆ ಸುಮ್ಮನೆ ಹೊಡೆದು ಹೊಡೆದು ದಣಿಯುತ್ತಿರಲಿ
ಹಾಳು ಭೂಮಿಯ ಯಾತ?

Ah, the sea was crowded with ships swollen with sails.
Came wave upon wave, rushing, frothing,
Aspirations, youth's retinue.
Went on steadily the march of victory,
As I won hundreds of worldly battles.
Peeled away recklessly just like that all my body's wealth.
But within me the evening shadows grew dense.
As I woke up frightened and cast my eyes;
There was a tumult of salt water, with not a hint of green land's fringe.
God, amidst the full sea I felt thirsty.
Said indifferently, let the days drag on while the going is good.
Every day like another,
Every night like another,
And every day the same....
How many days?
A wheel that hums and drills into my ears,
Standing, squatting, sleeping, copulating,

There was but a single question:
With what significance shall I invest all this nothingness?
Must tear open this riddle, otherwise
There will be no living waters from the angel-guarded lake.
What am I but a sheer girl,
Whose heart yearned for the electric light within
And whose head dashed desperately against the panes.
The wound festered, rotted and became swollen,
And stank like hell!
Where is the herb that can cure it!
Or has ever been born such a herb!
Why should tire myself working the wheels
Of this ruined well?
An emptiness not even the seven seas can fertilise
And let even a single seed sprout.
Why should I ask in despair, "why? why is it thus?"
That is the way it is; if we resign to it,
We must toil and toil,
And otherwise....

ಸಪ್ತಸಮುದ್ರವ ತಂದು ಸುರುವಿದರು
ಒಂದು ಜೀವ ವೊಳೆಯುಗೊಡದ ಶೂನ್ಯ.
ಏಕೆ, ಏಕೆ, ಹೀಗೇಕೆಂದು ಯಾಕೆ ಹಲುಬಲಿ ಬರಿದೆ?
ಅದು ಇರುವದೇ ಹಾಗೆ; ಒಪ್ಪಿದರೆ ಇದ್ದು ದುಡಿಯಬೇಕು,
ಇಲ್ಲವಾದರೆ . . . .

3

ಮರಿಲಿನ್,
ನೀನು
ನಿತ್ಯವೂ ನನ್ನ ಎದೆ ಕಾವು ಕುಳಿತಿರುವ ಭಾವಗಳ
ವಸ್ತುಪ್ರತಿರೂಪ—
ವೇನು?
ನನಗು ಸಹ ತಲೆತುಂಬ ಏನೇನೋ ಗಜಿಬಿಜಿ ಆಸೆ.
ಹೊಡೆದು ಅಟ್ಟಿದರು ಹೊಲಸು ಕಂಡ ನೊಣದಂತೆ
ಮುಕುರುವ ಕನಸು.
ವಿಷುವೃತ್ತ ಬಿಸಿಲಲ್ಲಿ ಕಾಡುಬೇಗೆಯ ನಡುವೆ
ಸಿಕ್ಕು ಕರಕಾದಂಥ ಬಿದಿರು ನಾನು.
ಜೇನುಹುಟ್ಟೆಂದು ಕೈಯಿಟ್ಟು ಕಡಜಿರಿಗೆಗಳು
ಕೊಟ್ಟ ನೋವಿನ ಕೊಡವ ಕುಡಿದವನು.
ಗುರುತ್ವಾಕರ್ಷಣದ ಕಕ್ಷೆ ಮೀರಿದ ಬಯಲಿನಲ್ಲಿ
ಕೊನೆಯಿರದ ಹುಟ್ಟುಕಡೆತ.
ಆದರೂ ನಿನ್ನಂತೆ ಸಾಯಲಾರೆ.
ಮರಿಲಿನ್,
ಎಷ್ಟೋ ಸಲ ಹೋಗಿರುವೆ
ಕತ್ತಲಿನಲ್ಲಿ ತಡಕುತ್ತ ಕಪ್ಪು ನೀರಿನತನಕ,
ಹೋಗಿ ಮೊಳಕಾಲಮಟ ನೀರಲ್ಲಿ ನಿಂತು
ಏನೇನೋ ನೆನಪಾಗಿ
ಎದೆಯು ಡವಡವ ಹೊಡೆದು.
ಮೈತುಂಬ ಬೆವರೊಡೆದು
ಥರಥರ ನಡುಗುವಂಗಾಂಗಗಳ ದರದರ ಎಳೆದು
ತಿರುಗಿ ತಂದಿರುವೆ.
ಮರಿಲೀನ್,
ನಿನಗೆ ಬದುಕಿಗಿಂತಲು ಸಾವೆ ಸುಲಭವಾಗಿರಬಹುದು.

III

Marylin,
You
Serve as an objective-correlative
To thoughts that hatch in my heart daily—
But are you, really?
My head is a chaos of hopes and desires.
Try as I can, they return like flies in love with filth,
These dreams that flock.
I drank from the pot of pain
Offered my hornets
When I thrust my hands into looked like a beehive
In a forest in flames, in equatorial heat.
Endless rowing
In a space beyond the purview of earth's gravity.
Yet I cannot die like you,
Marylin,
Though I have been, times without number,
Groping to the edge of darkest waters,
Stood in knee-deep water,
And remembering something,
The heart thudded,
The entire body sweated,
I dragged my vibrant limbs with effort,
Brought it back.
Marylin, you might have found dying easier than living.
Not me,
The brave male who is living it out.
Yet, you remain the objective-correlative
To thoughts that are hatched daily in my heart.

*Tr. K. Raghavendra Rao*

ನನಗಲ್ಲ,
ಹಾಗಾಗಿ ಬದುಕಿರುವ ಗಂಡು ನಾನು.
ಆದರೂ
ನಿತ್ಯವೂ ನನ್ನ ಎದೆ ಕಾವು ಕುಳಿತಿರುವ ಭಾವಗಳ
ವಸ್ತುಪ್ರತಿರೂಪ ನೀನು.

## ಗೊಳಲಿ

ಸಿದ್ಧಲಿಂಗ ಪಟ್ಟಣಶೆಟ್ಟಿ

ನರಗಳನು ಹುರಿಹುರಿ ಹಾಕಿ
ನಿನ್ನ ತೋಳನು ಬಳಸಿ ಗಂಧದಲಿ ಕಟ್ಟಿ
ನಾನೆಳೆದು ನಿಂತಾಗ
ಯಾವ ಗಗನದಿ ತೊದಲು ತುಳುಕಾಡಿತೊ!

ನೀನು ಬೆಂಕಿಯ ಪುತ್ರಿ.
ನಾ ಆಜ್ಯದವತಾರವಾಗಿರುವಾಗ
ನಮ್ಮೆದೆ ವಸಂತವನು ನುಂಗಿ
ಯಾವ ಬನದಲಿ ಹಸಿರು ಮಿಡುಕಾಡಿತೊ!

ನಿನ್ನ ಹೆಸರೆತ್ತಿದರೆ
ಹೂವರಳಿ ಗಂಧ ಹೊರಹೊಮ್ಮಿ ಚಿಮ್ಮುತಲಿತ್ತು,
ನನ್ನೆವೆ-ಪತಂಗಕ್ಕೆ ನೀನು ಬಾಲಾಗಸಿಯುವ
ಭಾವ-ಗಗನದಿ ನಾವಿಬ್ಬರೂ ಹಾರುತಿರೆ
ಯಾವ ದಾರವು ಎಲ್ಲಿ ತೊಡಕಾಯಿತೊ!

ಉಕ್ಕನ್ನು ಬಿತ್ತಿ. ಮಲ್ಲಿಗೆಯ ಬೆಳೆದು
ಮಧುರಸವ ಹಿಂಡಿ ದಿನದಿನವು ಕುಡಿದಿಹೆವು.
ನಮಗೆ ತಿಳಿಯದ ಹಾಗೆ
ಏಕೆ ಉಲ್ಕಾಪಾತವಾದ ಹಾಗೆ
ನಮ್ಮ ಬದುಕೆಲ್ಲ ಬರಡಾಯಿತೊ!

ನೀ ಪ್ರವಾಹದ ಗತಿಯ ಗರ್ಭದಲ್ಲಿದ್ದಿ
ನಿಂತ ಮಡಹು ಜಲ ಕಲಕಿ ಅರಸಿದೆ ನಾನು.
ನೀ ವಿಚಾರದ ಸುಳಿಯ ಪದರದೆಯೊಳಡಗಿದ್ದಿ
ನಾನು ವ್ಯವಹಾರದಲಿ ನಿನ್ನ ಬಯಸಿದ್ದೆ.
ನೀನು ನಭ-ನೀಲಿಯಲಿ ನಕ್ಷತ್ರವಾಗಿದ್ದಿ
ಕೆರೆಯ ನೀರಿನ ಬಿಂಬದಲ್ಲಿ ನಾ ನೋಡಿದ್ದೆ.
ಈ ಹುಚ್ಚ ಮರುಳ ಮನ
ಏಕೆ ರಾಮಾಯಣದಿ ನಿನ್ನ ಹುಡುಕಾಡಿತೊ!

## THE HUSK

*Siddhalinga Pattanashetti*

As I, twining the nerves,
Tying up your arms in sandal,
Stood straightening the thread,
In what sky the first words tumbled out!

You are a daughter of fire,
I am ghee incarnate,
Swallowing our spring,
In what forest did green lament!

At the very mention of your name,
The flower blossomed scattering fragrance,
To the kite of my eye-lash you are the tail
As we flew in a sky of imagination
Which thread got wrongly knotted where!

Sowing steel, growing jasmines
Squeezing honey we drank every day,
Unbeknown to us
Like the fall of a comet
Our whole life turned meaningless!

You were in the womb of the flowing water,
But I sought you in a muddy pool,
You were hiding behind a curtain of thoughts
But I desired you for mundane transactions,
You were a star in the blueness of the sky
But I saw you in a reflection in the pond,
Having given another birth to *Sita*,
This mad, stupid mind,
Why did it search for you in the *Ramayana*!

*Tr. K. Raghavendra Rao*

# ಚೀಲ

**ಸಿದ್ಧಲಿಂಗ ಪಟ್ಟಣಶೆಟ್ಟಿ**

ನಾನು ಸತ್ತಿದ್ದೇನೆ,
ಹೌದು, ಈ ವಯಸ್ಸಿನಲ್ಲಿ ಯಾರು ಬದುಕುತ್ತಾರೆ
ಈ ದೇಶದಲ್ಲಿ? ಬದುಕಿ ಮಾಡುವುದಾದರೂ ಏನು?
ಅದಕ್ಕಾಗಿ ನಾನು ಸತ್ತಿದ್ದೇನೆ ಈ ದೇಶದಲ್ಲಿ.

ನನಗೀಗ 33.
ರಾಷ್ಟ್ರೀಯ ಆರೋಗ್ಯಮಿತಿಗನುಸಾರ
ಸತ್ತವರ ಸಾಲಲ್ಲಿ ಎಂದೋ ಸಮಾಧಿಗೊಂಡಿದ್ದೇನೆ
ಬದುಕುವ ಹಕ್ಕು ನನಗೀಗ ಉಳಿದಿಲ್ಲ
ಅದಕ್ಕಾಗಿ ಸತ್ತಿದ್ದೇನೆ.

3–4 ಮಹಾ ಚುನಾವಣೆಗಳ ವಿಚಿತ್ರ ಗತ್ತುಗಾರಿಕೆಯಲ್ಲಿ
ಮನೆ ಬಳಸಿಕೊಂಡು
10 ಹೆಜ್ಜೆ ಸಹ ಎದೆ ಸೆಟೆಸಿ ನಡೆಯುವುದು ಮರೆತುಹೋದದ್ದು
ಮೊನ್ನೆ ಕಾಲೇಜಿಗೆ ಹೊರಟಾಗ ಸರಕ್ಕನೆ ನೆನಪಾಗಬೇಕೆ?
ಕೈಯಲ್ಲಿ ಹೊಸ ಚರ್ಮದ ಚೀಲ ಹಿಡಿದು
ದೊಡ್ಡವನಾದೆ
ಎಂದು ದೊಡ್ಡ ಹೆಜ್ಜೆ ಹಾಕಿ ಹೊರಟೆ
ಸುತ್ತಮುತ್ತ ಲಟಪಟ ಸುಡುವ ಬೇಸಿಗೆಯ ಕೆರೆಗಳನ್ನು
ಸವೆದ ಕೆರಗಳನ್ನು ಮಸಕು ಚಾಳೀಸುಗಳನ್ನು ಪಿಟಿಪಿಟಿ ಭಾಗಾಕಾರ
ವಜಾಬಾಕಿಗಳನ್ನು ದನದ ಹಿಂಗಾಲ ಧೂಳನ್ನು ಗುಣಿಸಿದೆ, ನೋಡಿದೆ
ನನ್ನ ಹೊಸ ಚರ್ಮಚಕ್ಕುಗಳಿಂದ.
ನನಗನ್ನಿಸಿತು: ನನಗೀಗ ಮಣ್ಣಿನ ಕನ್ನಡಕ ಬೇಕು.
ಎರಡೂ ಕಾಲು ಚೀಲದ ಗೋರಿಯಲ್ಲಿಳಿಬಿಟ್ಟು ಹೊರಟ
ಒಂದು ಎರಡು ಮೂರು . . . ಅಲ್ಲ,
5 ವರ್ಷಗಳಾಯ್ತು ಮದುವೆಯಾಗಿ.

## A DECLARATION

*Siddhalinga Pattanashetti*

I'm a dead man. Yes.
I'm 33. Well beyond
The national limit of my motherland.
That's why I'm
A dead man.

I'm an experienced man.
I'm married. I married
5 years ago.
Dreaming of buying books
I go to market,
And crawl back with bags
Filled with vegetables.
I think of thinking great things
And end up reading headlines
About defections and politicians and
Abortions and divorces.

I break into smile occasionally.
Really. And I'm shocked.
I think of a pair of eyes
That mirrored my eyes,
Of quivering lips that sucked
Poetry from my sighs,
—and I'm shocked.

Isn't that enough
To declare myself
A dead man?

*Tr. Chandrasekhar Patil*

ಅಂದೇ ಚರ್ಮದ ಚೀಲ ಹಿಡಿದಿದ್ದೇನೆ,
ಅಂದೇ ನನಗೆ 33,
'In my beginning is my end.'

ನಾ ಅನುಭವಸ್ಥ. ಯಾಕಂದರೆ ನಾ ಗೃಹಸ್ಥ. ವಯಸ್ಸಾಗಿದೆ
ಸೋತಿದ್ದೇನೆ ಸಂಜೆ ಪೇಟೆಯಲ್ಲಿ ದಿನಾ
ಪುಸ್ತಕ ತರಹೋಗಿ ತರಕಾರಿ ತರುತ್ತೇನೆ
ಯೋಚನೆ ಮಾಡಹೋಗಿ ಸರಕಾರ ಸರಿಯುವುದ ಓದುತ್ತೇನೆ
ಸಾಯುವುದಕ್ಕೆ ಇಷ್ಟು ಸಾಕಾಗದೆ
ಈ ದೇಶದಲ್ಲಿ? ನಾ ನಗುತ್ತಿದ್ದುದ್ದು ನನಗೇ 1 ಕತೆ.
2 ಬೆಳ್ಳಿಯ ಕಣ್ಣು ನನಗಾಗಿ ಮಿಂಚಿದ್ದು
ನನ್ನ ಉಸಿರೆಲ್ಲ ಗಂಧದಮೃತ ಕವಿತೆಯಾದದ್ದು
ಸೆರಗುಗಾಳಿಗೆ ರೋಮಾಂಚನದ ಮತ್ತೇರಿ ಕುಣಿದದ್ದು
ಇತ್ಯಾದಿ ಎಲ್ಲ ನೆನಪಾದದ್ದೆ ಸಾಕ್ಷಿ
ಬದುಕುವ ಹಕ್ಕು ಉಳಿದಿಲ್ಲ ನನಗೆ
ನಾನು ಸಾವಿನ ಚೀಲ.

# ವೇದಾಂತ

ಸೋಮಶೇಖರ ಇಮ್ರಾಪೂರ

ಹೀಗ್ಯಾಕ ಮಾಡ್ತಿಬೇ ಮುದುಕಿ
ಏನಾಗೇತಿ
ಎದಿ ಎದಿ ಬಡಕೊಳ್ತೀದಿ
ಬಿಟ್ಟೊಬಿಡ್ದ ಹೊಯ್ಕೊಳ್ತೀದಿ.
ಎದೀ ಹೋದ್ರೂ ಬಿಡವೊಲ್ಲೆಲ್ಲಾ
ಏನಾಗೇತಿ
ಎಮ್ಮಿ ಸತ್ರೇನಾತು
ಗಟ್ಟಿ ಧೈರ್ಯ ಮಾಡಬೇಕು
ಯಾರೇನ್ಮಾಡೋದೈತಿ
ಮುದುಕ ಸತ್ತ್ ಹತ್ತೊರುಷದಾಗ
ಮತ್ತೊಂದು ಬಂತು, ಬರಬಾರ್ದಿತ್ತು
ಆಗೂದೆಲ್ಲಾ ಆಗಿಹೋತು
ಸುಮ್ನಾಗು ಏನಾತು
ಯಾರ್ ಕೈಯಾಗೇನೈತಿ
ನಿನ್ನೆಮ್ಮಿ ಕೈಲಾಸ್ಕೋತು
ವ್ಯಾಗ ಹೋಗಿ ಶಿವ್ಗ ಸಲ್ಲಿತು
ಪುಣ್ಯವಂತಿ ಆತು
ಸುಮ್ನಾಗು ಯಾಕಳತಿ
ತೌಡು ಇಟ್ಟೀ ಮೇವು ಹಾಕ್ದಿ
ಕೈಯಾನ್ ರೊಟ್ಟೀ ಬಾಯಾಗಿಟ್ಟಿ
ಪಿರುತೀಲಿಂದಾ ಬೆಳೆಸಿದ್ದೆವಾ
ಶಿವಪ್ಪ ಬಾಳಾ ಕೆಟ್ಟ ಮಾಡ್ದಾ
ಏನ್ಮಾಡೂದು
ಜೀವದಾಗ ಏನೈತಿ
ಏನ್ ಕಟಿಗೊಂಡು ಸಾಯೂದೈತಿ
ಒಂದಿನಾ ಲಪ್ಪಂತ ಕಣ್ಮುಚ್ಚೊದು
ಇರೂತನಾ ಎಲ್ಲಾ ನಂದು

## PHILOSOPHICAL WISDOM

*Somashekhara Imrapur*

What's the matter with you, old woman?
What's happened?
Why beat your breasts and scream incessantly?
Your breasts will be damaged at this rate—
What if a buffalo dies?
Have courage and strong faith!
What can anyone do about it anyway?
True, it was hard,
Happening within ten years of your old man's death!
What's happened has happened—
Be quiet, it is nothing extraordinary.
It is in nobody's hands,
And your buffalo has entered *Kailash* itself,
Has gone off as *Shiva's* gift,
And is a fortunate one!
Cease crying—
You fed her with husk and grass,
Gave her bread with your own hand,
Tended her with love.
True, Shiva has been cruel,
But what can we do about it?
What's there in life anyway?
What can we collect till death?
One fine morning, our eyes click shut for good!
Till death grabs us, we grab everything for ourselves,
Claim all for ourselves,
But we all go the same way to death-
Why are there tears in your eyes?
When entreated, you should stop crying.
Blame not *Shiva*,
For what can He do, poor fellow?
All his devotees have become renegades,

ಎಲ್ಲಾ ನಂದು ಅಂತಾ ಕೊಚ್ಚಿ
ಹಾಂಗs ಹೋಗೂದs ಎವ್ವಾ
ಹಾಂಗs ಹೋಗೂದು.
ಮತ್ತ್ಯಾಕವಾ ಕಣ್ಣಾಗ ನೀರು
ಸುಮ್ನಾಗಂದ್ರಾಗಬೇಕು
ಶಿವುನ್ನ್ಯಾಕ ಸಾಪಳಸ್ತೀದಿ
ಏನ್ಮಾಡ್ಯಾನವನೂ ಪಾಪ !
ಭಕ್ತರೆಲ್ಲಾ ಭಂಡ್ರಾಗಿ
ಗುಡಿಗೆ ಬಂದು ಗೌಡಕಿ ಮಾಡಿ
ಹಾರಿ ಹಾರಿ ಗಂಟೀ ಹೊಡದು
ಜಡದ್ ಜಡದ್ ವರ ಕೇಳಿ
ತೆಲಿ ಕೆಡಿಸ್ಯಾರ್ಬೇ ಎವ್ವಾ
ತೆಲಿ ಕೆಡಿಸ್ಯಾರ
ಮತ್ತ್ಯಾಕ್ ಕಣ್ಣಾಗ ನೀರ್ತರತೀ
ಸ್ವರ್ಗದಾನೆಮ್ಮಿ ಚಡಪಡಿಸೀತು !
ಸೋರ‍್ಗಣ್ಣ್ ಮಾಡಿ ಹೀಂಗ
ಸುಂದ್ ಬಡ್ದ್ ಕುಂದರಬ್ಯಾಡ
ಎಮ್ಮೀಗೂಡ ನೀನೂ ಹೋದೀ
ಅತ್ತ್ ಹಾದೀ ಹೆಣಾ ಆದೀ
ಕಣ್ಣೆಲ್ಲಾ ಕೆಂಜಿಗಾದ್ವು
ಸುಮ್ನಾಗವಾ.
ನಮಗೂ ದುಃಖ ಆಕ್ಕೈತಿ
ಅತ್ರೇನಾದಾಂಗಾತು
ನಿನ್ನೆಮ್ಮಿ ಬಂದಾಂಗಾತ?
ಎಮ್ಮಿ ಅಂದ್ರು ಅದs ಎಮ್ಮಿ?
ಅದರ ಸಡಗರಾ ಹೇಳ್ಳಾಸಲ್ಲ
ಕೆಚ್ಚಲಂತೂ ದೊಡ್ಡ ಹಂಡೆ
ನೆಲಕ ಅದಕ ಎಳಿ ಆಡ್ತಿತ್ತು
ಬಟ್ಟು ಇಟ್ರ್ ನಡಲಿಕ್ಕಿಲ್ಲ
ನನಗ ಗೊತ್ತು ಅಂಥಾ ಹಾಲು
ಸುಮ್ನಾಗವಾ.

ನಿನ್ನೇ ನನಗ ಅನಿಸಿತ್ತವ್ವಾ
ನಿನ್ನ್ಮನೀ ಮುರದ್‌ಮ್ಯಾಗ

Who visit His temple as bosses,
Hop again and again to swing the bells,
Couch their demands in firm tones,
And have turned his head off!
They have driven Him crazy, mother,
And why do you cry loud?
If you go on like this, the buffalo in heaven may worry!
Do not let your eyes pour tears,
Sit not benumbed, speechless—
You, too, will soon follow your buffalo at this rate,
After you become a corpse through over-crying!
Your eyes have grown red,
Please, stop crying now at least.
Of course, we are all sorry,
But what use crying now?
Would that bring back your buffalo?
True, yours was a buffalo among buffaloes;
Splendid beyond words,
Its udders as capacious as giant pots;
Its milk so thick as to look like a thread reaching the ground,
And so viscous you couldn't stab with a finger!
We all know, mother,
It gave the best milk ever!
You know, I had an uneasy premonition yesterday,
As I espied a owl scream from your tree-top,
Heard the milk-white bird sing
And the plantain tree groan—
Saw the mushroom sprout in the morning—
Soon enough the news reached me,
And it pained me no end, I assure you—
Look here, mother please, you have to suffer it somehow,
And so be quiet.

*Tr. K. Raghavendra Rao*

ಗೂಗಿ ಬಂದು ಒದರ್ತಿತ್ತು
ಹಾಲಕ್ಕಿ ಹಾಡತಿತ್ತು
ಬಾಳಿಗಿಡಾ ನರಳ್ತಿತ್ತು
ಮುಂಜಾನೆದ್ದು ನೋಡ್ತೀನಿ
ನಾಯಿ ಕಿವಿ ಕೊಡವ್ರುತಿತ್ತು
ಅಪ್ಪರೊಳಗ ಸುದ್ದಿ ಬಂತು
ನನಗೂ ಬಾಳ್ ಸಂಗಟಾತು
ಹ್ಯಾಂಗಾರ ಸಂಬಾಳ್ಸಿಗೊಂಡು
ಸುಪ್ನ್ಯಾಗವಾ.

# ಕವಿಗಳ ಪರಿಚಯ

1. **ಎಂ. ಗೋವಿಂದ ಪೈ** (1883–1963)
'ಗಿಳಿವಿಂಡು' (ಕವನ ಸಂಗ್ರಹ), 'ಗೊಲ್ಗೊಥಾ' (ಕಥನಕಾವ್ಯ), 'ವೈಶಾಖಿ' (ಖಂಡಕಾವ್ಯ), 'ಹೆಬ್ಬೆರಳು' (ನಾಟಕ)—ಅವರ ಕೆಲವು ಕೃತಿಗಳು; ನೂರಾರು ಸಂಶೋಧನಾತ್ಮಕ ಲೇಖನಗಳು; ಮದರಾಸು ಸರಕಾರದಿಂದ ರಾಷ್ಟ್ರಕವಿ ಎಂದು ಸನ್ಮಾನಿತರು.

2. **ಡಾ॥ ಮಾಸ್ತಿ ವೆಂಕಟೇಶ ಅಯ್ಯಂಗಾರ** ('ಶ್ರೀನಿವಾಸ')
ಜನನ: 1891; ಸಣ್ಣಕಥೆ, ಕವಿತೆ, ನಾಟಕ, ವಿಮರ್ಶೆ, ಆತ್ಮಚರಿತ್ರೆ—ಇತ್ಯಾದಿ ಪ್ರಕಾರಗಳಲ್ಲಿ ಹಲವು ಕೃತಿಗಳು: ಎರಡು ದಶಕಗಳ ಕಾಲ 'ಜೀವನ' ಮಾಸಪತ್ರಿಕೆಯ ಸಂಪಾದಕರು; 'ಸಣ್ಣ ಕಥೆಗಳು 12–13' ಸಂಗ್ರಹಕ್ಕೆ ಸಾಹಿತ್ಯ ಅಕಾಡೆಮಿ ಪ್ರಶಸ್ತಿ; ಪಿ. ಇ. ಎನ್. ಅಖಿಲ ಭಾರತ ಕೇಂದ್ರದ ಅಧ್ಯಕ್ಷರು.

3. **ಪದ್ಮಶ್ರೀ ಡಾ॥ ದ. ರಾ. ಬೇಂದ್ರೆ** ('ಅಂಬಿಕಾತನಯದತ್ತ')
ಜನನ: 1896; ಕವನಸಂಗ್ರಹಗಳು, ನಾಟಕಗಳು, ಸಾಹಿತ್ಯ ವಿಮರ್ಶೆ ಇವರ ಮುಖ್ಯ ಪ್ರಕಟನೆಗಳು. 'ಅರಳು–ಮರಳು' ಪಂಚಕಾವ್ಯಗುಚ್ಛಕ್ಕೆ ಸಾಹಿತ್ಯ ಅಕಾಡೆಮಿ ಪ್ರಶಸ್ತಿ; 'ನಾಕು ತಂತಿ' ಕವನ ಸಂಗ್ರಹಕ್ಕೆ ಭಾರತೀಯ ಜ್ಞಾನಪೀಠ ಪ್ರಶಸ್ತಿ.

4. **ಡಾ॥ ವಿ. ಸೀತಾರಾಮಯ್ಯ** ('ವಿ. ಸೀ.')
ಜನನ: 1899; ಕಾವ್ಯ, ಲಲಿತ ಪ್ರಬಂಧ, ನಾಟಕ, ಸಾಹಿತ್ಯ-ಕಲಾ ವಿಮರ್ಶೆ—ಇತ್ಯಾದಿ ಪ್ರಕಾರಗಳಲ್ಲಿ ಹಲವಾರು ಕೃತಿಗಳು; ಅರ್ಥಶಾಸ್ತ್ರದಲ್ಲಿಯೂ ತಜ್ಞರು; 'ಅರಲು–ಬರಲು' ಕವನ ಸಂಗ್ರಹಕ್ಕೆ ಸಾಹಿತ್ಯ ಅಕಾಡೆಮಿ ಪ್ರಶಸ್ತಿ; ಇಂಗ್ಲಿಷಿನಲ್ಲಿಯೂ ಕೃತಿ ರಚನೆ ಮಾಡಿದ್ದಾರೆ.

5. **ಡಾ॥ ಬೆಟಗೇರಿ ಕೃಷ್ಣಶರ್ಮ** ('ಆನಂದಕಂದ')
ಜನನ: 1900; ಕಾವ್ಯ ಸಂಗ್ರಹಗಳು, ಸಣ್ಣ ಕಥೆಯ ಸಂಕಲನಗಳು, ಕಾದಂಬರಿಗಳು, ಬಾನುಲಿ ರೂಪಕಗಳು, ಜನಪದ ಸಾಹಿತ್ಯ ಕುರಿತ ಲೇಖನಗಳು—ಇತ್ಯಾದಿ ಇವರ ಪ್ರಕಟನೆಗಳು. ಅನೇಕ ವರ್ಷ 'ಜಯಂತಿ' ಮಾಸಪತ್ರಿಕೆಯ ಸಂಪಾದಕರಾಗಿದ್ದರು.

6. **ಚೆನ್ನಮಲ್ಲಪ್ಪ ಗಲಗಲಿ** ('ಮಧುರಚೆನ್ನ') (1903–1953)
ಕಾವ್ಯ, ಆತ್ಮಚರಿತ್ರೆ, ಸಂಶೋಧನ, ಆಧ್ಯಾತ್ಮಿಕ ಲೇಖನಗಳು, ಅನುವಾದಗಳು—ಇತ್ಯಾದಿ ಅವರ ಪ್ರಕಟನೆಗಳು.

7. **ಪದ್ಮಭೂಷಣ ಡಾ॥ ಕೆ. ವಿ. ಪುಟ್ಟಪ್ಪ** ('ಕುವೆಂಪು')
ಜನನ: 1904; ಮೈಸೂರು ವಿಶ್ವವಿದ್ಯಾನಿಲಯದ ನಿವೃತ್ತ ಕುಲಪತಿಗಳು; ಕಾವ್ಯ, ಸಣ್ಣ ಕಥೆ, ಕಾದಂಬರಿ, ನಾಟಕ, ಪ್ರಬಂಧ, ವಿಮರ್ಶೆ, ಜೀವನ ಚರಿತ್ರೆ—ಇತ್ಯಾದಿ ಪ್ರಕಾರಗಳಲ್ಲಿ ಹಲವಾರು ಕೃತಿಗಳ ಪ್ರಕಟನೆ; 'ಶ್ರೀರಾಮಾಯಣದರ್ಶನಂ' ಮಹಾಕಾವ್ಯಕ್ಕೆ ಸಾಹಿತ್ಯ ಅಕಾಡೆಮಿ ಹಾಗೂ ಭಾರತೀಯ ಜ್ಞಾನಪೀಠ ಪ್ರಶಸ್ತಿಗಳು.

8. **ಕಡಂಗೋಡ್ಲು ಶಂಕರಭಟ್ಟ** (1904–1968)
ಕವನ ಸಂಗ್ರಹಗಳು, ಸಣ್ಣಕಥೆಗಳು, ಕಾದಂಬರಿಗಳು. ವಿಮರ್ಶಾ ಲೇಖನಗಳು—ಇವರ ಪ್ರಕಟನೆಗಳು. ಹಲವಾರು ವರ್ಷ 'ರಾಷ್ಟ್ರಬಂಧು', ಹಾಗೂ 'ರಾಷ್ಟ್ರಮತ' ಪತ್ರಿಕೆಗಳ ಸಂಪಾದಕರಾಗಿದ್ದರು.

9. **ಡಾ॥ ಪಿ. ಟಿ. ನರಸಿಂಹಾಚಾರ್** (ಪು. ತಿ. ನ.)
ಜನನ: 1905; ಕಾವ್ಯ ಸಂಗ್ರಹಗಳು, ಪ್ರಬಂಧಗಳು, ಗೀತನಾಟಕಗಳು. ವಿಮರ್ಶಾತ್ಮಕ ಲೇಖನಗಳು—ಇವರ ಪ್ರಕಟನೆಗಳು; 'ಹಂಸದಮಯಂತಿ ಮತ್ತು ಇತರ ರೂಪಕಗಳು' ಕೃತಿಗೆ ಸಾಹಿತ್ಯ ಅಕಾಡೆಮಿ ಪ್ರಶಸ್ತಿ.

10. **ಡಾ॥ ಆರ್. ಎಸ್. ಮುಗಳಿ** ('ರಸಿಕರಂಗ')
ಜನನ: 1906; ಕಾವ್ಯ, ಸಣ್ಣಕಥೆ, ಕಾದಂಬರಿ, ನಾಟಕ, ವಿಮರ್ಶೆ—ಇತ್ಯಾದಿ ಪ್ರಕಾರಗಳಲ್ಲಿ ಹಲವು ಕೃತಿಗಳು; 'ಕನ್ನಡ ಸಾಹಿತ್ಯ ಚರಿತ್ರೆ'ಕ್ಕೆ ಸಾಹಿತ್ಯ ಅಕಾಡೆಮಿ ಪ್ರಶಸ್ತಿ; ಬೆಂಗಳೂರು ವಿಶ್ವವಿದ್ಯಾಲಯದ ಕನ್ನಡ ವಿಭಾಗದ ನಿವೃತ್ತ ಪ್ರಾಧ್ಯಾಪಕರು.

11. **ಈಶ್ವರ ಸಣಕಲ್ಲ**
ಜನನ: 1906; 'ಕೋರಿಕೆ', 'ಬಟ್ಟೆ' ಇವೆರಡೂ ಅವರ ಕವನ ಸಂಗ್ರಹಗಳು.

12. **ಡಾ॥ ಡಿ. ಎಸ್. ಕರ್ಕಿ**
ಜನನ: 1907; ಕವನ ಸಂಗ್ರಹಗಳು, ಶಿಶುಗೀತಗಳು, ಪ್ರಬಂಧಗಳು ಮತ್ತು 'ಛಂದೋವಿಕಾಸ' ಸಂಶೋಧನ ಗ್ರಂಥ—ಇವರ ಪ್ರಕಟನೆಗಳು. ಹುಬ್ಬಳ್ಳಿ ಕಾಲೇಜಿನ ನಿವೃತ್ತ ಪ್ರಿನ್ಸಿಪಾಲರು.

13. **ಪದ್ಮಶ್ರೀ ಡಾ॥ ವಿ. ಕೆ. ಗೋಕಾಕ** ('ವಿನಾಯಕ')
ಜನನ: 1909; ಬೆಂಗಳೂರು ವಿಶ್ವವಿದ್ಯಾಲಯದ ಕುಲಪತಿಗಳಾಗಿ ನಿವೃತ್ತರಾದನಂತರ ಸಿಮ್ಲಾದಲ್ಲಿಯ ಇಂಡಿಯನ್ ಇನ್ಸ್‌ಟಿಟ್ಯೂಟ್ ಆಫ್ ಅಡ್ವಾನ್ಸ್‌ಡ್ ಸ್ಟಡೀಜದ ಡಾಯರೆಕ್ಟರ ರಾಗಿ ಕೆಲಕಾಲ ಸೇವೆ ಸಲ್ಲಿಸಿದರು. ಕಾವ್ಯ, ಕಾದಂಬರಿ, ನಾಟಕ, ವಿಮರ್ಶೆ, ಪ್ರಬಂಧ, ಪ್ರವಾಸ ಸಾಹಿತ್ಯ—ಇತ್ಯಾದಿ ಸಾಹಿತ್ಯ ಪ್ರಕಾರಗಳಲ್ಲಿ ಹಲವಾರು ಕೃತಿಗಳ ರಚನೆ: 'ದ್ಯಾವಾ ಪೃಥಿವಿ' ಕಾವ್ಯಕ್ಕೆ ಸಾಹಿತ್ಯ ಅಕಾಡೆಮಿ ಪ್ರಶಸ್ತಿ: ಇಂಗ್ಲಿಷಿನಲ್ಲಿಯೂ ಗ್ರಂಥರಚನೆ ಮಾಡಿದ್ದಾರೆ.

14. **ಡಾ॥ ದಿನಕರ ದೇಸಾಯಿ**
ಜನನ: 1909; ಕಾವ್ಯಸಂಗ್ರಹ, ಶಿಶುಗೀತ, ಪ್ರವಾಸ ಸಾಹಿತ್ಯ ಇತ್ಯಾದಿ ಅವರ ಪ್ರಕಟನೆಗಳು; ಇಂಗ್ಲಿಷಿನಲ್ಲಿಯೂ ಬರೆದಿದ್ದಾರೆ. ಕೆನರಾ ವೆಲ್‌ಫೇರ್ ಟ್ರಸ್ಟಿನ ಅಧ್ಯಕ್ಷರು.

15. **ಡಾ॥ ಶ್ರೀಮತಿ ಜಯದೇವಿತಾಯಿ ಲಿಗಾಡೆ**
ಜನನ: 1912; ಕವನ ಸಂಗ್ರಹಗಳು ಹಾಗೂ 'ಸಿದ್ಧರಾಮೇಶ್ವರ ಪುರಾಣ' ಇವರ ಕೃತಿಗಳು. ಕನ್ನಡ ವಚನ ಸಾಹಿತ್ಯವನ್ನು ಮರಾಠಿಗೆ ಭಾಷಾಂತರಿಸಿದ್ದಾರೆ. ಮರಾಠಿಯಲ್ಲಿಯೂ ಬರೆಯುತ್ತಾರೆ.

16. **ಎಸ್. ಡಿ. ಇಂಚಲ (1913–1974)**
ಬಿಡಿಗೀತೆಗಳನ್ನೂ ಮೂರು ಕವನ ಸಂಗ್ರಹಗಳನ್ನೂ ಪ್ರಕಟಿಸಿದ್ದಾರೆ. 'ಆದರ್ಶ ಶಿಕ್ಷಕ' ಎಂಬ ರಾಷ್ಟ್ರ ಪ್ರಶಸ್ತಿ ಪಡೆದವರು.

17. **ಕೆ. ಎಸ್. ನರಸಿಂಹಸ್ವಾಮಿ**
ಜನನ: 1915: ಅನೇಕ ಕವನ ಸಂಗ್ರಹಗಳನ್ನು ಒಂದು ಪ್ರಬಂಧ ಸಂಗ್ರಹವನ್ನೂ ಪ್ರಕಟಿಸಿರುವರು. ಸುಪ್ರಸಿದ್ಧವಾದ ಪ್ರಣಯಗೀತೆಗಳ ಸಂಗ್ರಹ 'ಮೈಸೂರು ಮಲ್ಲಿಗೆ' ಇವರಿಗೆ ಕೀರ್ತಿ ತಂದ ಕೃತಿ.

18. **ಎಂ. ಗೋಪಾಲಕೃಷ್ಣ ಅಡಿಗ**
ಜನನ: 1918: ಹಲವಾರು ಕವನ ಸಂಗ್ರಹಗಳು, ವಿಮರ್ಶಾತ್ಮಕ ಲೇಖನಗಳು, ಕಾದಂಬರಿಗಳು, ರಾಜಕೀಯ ಹಾಗೂ ಶೈಕ್ಷಣಿಕ ಪ್ರಬಂಧಗಳು, ಅನುವಾದಗಳು ಇತ್ಯಾದಿ ಅವರ ಕೃತಿಗಳು. 'ಸಾಕ್ಷಿ' ತ್ರೈಮಾಸಿಕದ ಸಂಪಾದಕರು; ಕಾಲೇಜುಗಳಲ್ಲಿ ಇಂಗ್ಲಿಷ್ ಅಧ್ಯಾಪಕರೂ, ಪ್ರಿನ್ಸಿಪಾಲರೂ ಆಗಿದ್ದರು.

19. **ಡಾ॥ ಸಿದ್ಧಯ್ಯ ಪುರಾಣಿಕ ('ಕಾವ್ಯಾನಂದ')**
ಜನನ: 1918; ಕಾವ್ಯ ಸಂಗ್ರಹಗಳು, ನಾಟಕಗಳು, ಚರಿತ್ರೆ, ಕಾದಂಬರಿ—ಇತ್ಯಾದಿ ಇವರ ಪ್ರಕಟನೆಗಳು. ಕರ್ನಾಟಕದ ಸರಕಾರದ ಆಯ್. ಎ. ಎಸ್. ಹುದ್ದೆಗಳಲ್ಲಿ ಕೆಲಸ ಮಾಡಿ ಇದೀಗ ನಿವೃತ್ತರಾಗಿದ್ದಾರೆ.

20. **ಡಾ॥ ಆರ್. ಸಿ. ಹಿರೇಮಠ**
ಜನನ: 1920; ಕಾವ್ಯ, ವಿಮರ್ಶೆ, ಸಂಶೋಧನಾ ಕ್ಷೇತ್ರಗಳಲ್ಲಿ ಹಲವಾರು ಕೃತಿಗಳನ್ನು ರಚಿಸಿದ್ದಾರೆ. ಹಿಂದಿನ ಕೆಲವು ಕಾವ್ಯಗಳನ್ನೂ ವಚನ ಸಾಹಿತ್ಯ ಸಂಕಲನಗಳನ್ನೂ ಸಂಪಾದಿಸಿ ಪ್ರಕಟಿಸಿದ್ದಾರೆ. ಪ್ರಸ್ತುತ ಅವರು ಕರ್ನಾಟಕ ವಿಶ್ವವಿದ್ಯಾಲಯದ ಕುಲಪತಿಗಳಾಗಿ ಕೆಲಸ ಮಾಡುತ್ತಿದ್ದಾರೆ.

21. **ಎಸ್. ಆರ್. ಯಕ್ಕುಂಡಿ**
ಜನನ: 1923: ಮೂರು ಕವನ ಸಂಗ್ರಹಗಳು ಮತ್ತು ರಷ್ಯನ್ ಭಾಷೆಯ ಹಲವು ಕವಿತೆಗಳ ಕನ್ನಡ ಅನುವಾದಗಳು ಬೆಳಕು ಕಂಡಿವೆ. ಪ್ರಸ್ತುತ ಅವರು ಹೈಸ್ಕೂಲೊಂದರ ಮುಖ್ಯಾಧ್ಯಾಪಕರಾಗಿದ್ದಾರೆ.

22. **ವಿ. ಜಿ. ಭಟ್ಟ**
ಜನನ: 1923: ಕಾವ್ಯ ಸಂಗ್ರಹಗಳು, ಕಥಾಸಂಗ್ರಹಗಳು, ಶಬ್ದಚಿತ್ರಗಳು—ಇತ್ಯಾದಿ ಇವರ ಪ್ರಕಟನೆಗಳು. ಖಾದಿ ಮತ್ತು ಗ್ರಾಮೋದ್ಯೋಗ ಮಂಡಳಿಯ ನಿರ್ದೇಶಕರಾಗಿ ಮುಂಬೈಯಲ್ಲಿ ಕೆಲಸಮಾಡುತ್ತಿದ್ದಾರೆ.

23. **ಗಂಗಾಧರ ಚಿತ್ತಾಲ**
ಜನನ: 1923: 'ಕಾಲದಕರೆ', 'ಮನುಕುಲದ ಹಾಡು', 'ಹರಿವ ನೀರಿದು'—ಇವು ಮೂರು ಅವರ ಕವನ ಸಂಗ್ರಹಗಳು; ಪಶ್ಚಿಮ ರೇಲ್ವೆಯ ಮುಖ್ಯ ಆಡಿಟರರಾಗಿ ಅವರು ಕೆಲಸ ಮಾಡುತ್ತಿದ್ದಾರೆ.

24. **ಡಾ॥ ಬಿ. ಸಿ. ರಾಮಚಂದ್ರ ಶರ್ಮ**
ಜನನ: 1925; ಕಾವ್ಯ, ನಾಟಕ, ಹಾಗೂ ಸಣ್ಣಕಥೆ ಇವರ ಮುಖ್ಯ ಕೃತಿ. ಲುಸಾಕಾ (ಝಾಂಬಿಯಾ)ದಲ್ಲಿ ಸಾಯಕಾಲಾಜಿಕಲ್ ಸರ್ವಿಸ್‌ದ ಮುಖ್ಯಸ್ಥರಾಗಿ ಕೆಲಸ ಮಾಡುತ್ತಿದ್ದಾರೆ.

25. **ಎಂ. ಅಕಬರ ಅಲಿ**
ಜನನ: 1925; ನಾಲ್ಕು ಕವನ ಸಂಗ್ರಹಗಳನ್ನೂ ಒಂದು ಕಾದಂಬರಿಯನ್ನೂ ಪ್ರಕಟಿಸಿದ್ದಾರೆ. ಮೈಸೂರು ವಿಶ್ವವಿದ್ಯಾಲಯದ ಅಂಚೆ ಮತ್ತು ತೆರಪಿನ ಶಿಕ್ಷಣ ಸಂಸ್ಥೆಯಲ್ಲಿ ಅಧ್ಯಾಪಕರಾಗಿದ್ದಾರೆ.

26. **ಡಾ॥ ಜಿ. ಎಸ್. ಶಿವರುದ್ರಪ್ಪ**
ಜನನ: 1926; ಹಲವಾರು ಕಾವ್ಯ ಸಂಗ್ರಹಗಳು, ವಿಮರ್ಶೆಯ ಗ್ರಂಥಗಳು ಇವರ ಪ್ರಕಟನೆಗಳು. 'ಸಮಗ್ರ ಕನ್ನಡ ಸಾಹಿತ್ಯ ಚರಿತ್ರೆ' ಹಾಗೂ 'ಸಾಹಿತ್ಯ ವಾರ್ಷಿಕ'ಗಳ ಪ್ರಧಾನ ಸಂಪಾದಕರು. ಬೆಂಗಳೂರು ವಿಶ್ವವಿದ್ಯಾಲಯದ ಕನ್ನಡ ಅಧ್ಯಯನ ಕೇಂದ್ರದ ಪ್ರಾಧ್ಯಾಪಕರು ಹಾಗೂ ಮುಖ್ಯಸ್ಥರು.

27. **ಡಾ॥ ಟಿ. ಆರ್. ರಾಜಶೇಖರಯ್ಯ**
ಜನನ: 1926; ಕಾವ್ಯ ಮತ್ತು ಸಣ್ಣಕಥೆಗಳ ಲೇಖಕರು. ಇಂಗ್ಲಿಷಿನಲ್ಲಿಯೂ ಕವನ ಮತ್ತು ವಿಮರ್ಶೆಗಳನ್ನು ಬರೆಯುತ್ತಾರೆ. ಗುಲ್ಬರ್ಗಾ ಸ್ನಾತಕೋತ್ತರ ಕೇಂದ್ರದ ಇಂಗ್ಲಿಷ್ ವಿಭಾಗದ ಪ್ರಾಧ್ಯಾಪಕರು ಹಾಗೂ ಮುಖ್ಯಸ್ಥರು.

28. **ಶಾಂತಯ್ಯ ('ಶಾಂತರಸ')**
ಜನನ: 1926; ಕವನ ಸಂಗ್ರಹಗಳು, ನಾಟಕಗಳು, ಪ್ರಬಂಧ ಸಂಕಲನಗಳು, ಅನುವಾದಗಳು, ಸಂಪಾದಿತ ಗ್ರಂಥಗಳು—ಇತ್ಯಾದಿ ಅವರ ಪ್ರಕಟನೆಗಳು. ರಾಯಚೂರಿನ ಹರ್ವರ್ಡ್ ಹೈಸ್ಕೂಲಿನಲ್ಲಿ ಅಧ್ಯಾಪಕರಾಗಿದ್ದಾರೆ.

29. **ಚೆನ್ನವೀರ ಕಣವಿ**
ಜನನ: 1928; ಅನೇಕ ಕವಿತಾ ಸಂಗ್ರಹಗಳ ಲೇಖಕ; ವಿಮರ್ಶಾ ಲೇಖನಗಳ ಎರಡು ಸಂಗ್ರಹಗಳೂ ಪ್ರಕಟವಾಗಿವೆ. ಕೆಲವು ಆ್ಯಂಥಾಲಜಿಗಳನ್ನೂ ಇತರ ಗ್ರಂಥಗಳನ್ನೂ ಸಂಪಾದಿಸಿ ಪ್ರಕಟಿಸಿದ್ದಾರೆ. ಪ್ರಸ್ತುತ ಅವರು ಕರ್ನಾಟಕ ವಿಶ್ವವಿದ್ಯಾಲಯದ ವ್ಯಾಸಂಗ ವಿಸ್ತರಣ ಮತ್ತು ಪ್ರಕಟನ ವಿಭಾಗದ ನಿರ್ದೇಶಕರಾಗಿ ಕೆಲಸ ಮಾಡುತ್ತಿದ್ದಾರೆ.

30. **ಡಾ॥ ಶಂಕರ ಮೊಕಾಶಿ ಪುಣೇಕರ**
ಜನನ: 1928; ಕವನ ಸಂಗ್ರಹ, ಕಾದಂಬರಿ, ವಿಮರ್ಶೆ—ಇವರ ಪ್ರಕಟಿತ ಕೃತಿಗಳು: ಇಂಗ್ಲಿಷಿನಲ್ಲಿಯೂ ಕಾವ್ಯ ಹಾಗೂ ವಿಮರ್ಶೆಯ ಗ್ರಂಥಗಳು ಪ್ರಕಟವಾಗಿವೆ. ಕರ್ನಾಟಕ ವಿಶ್ವವಿದ್ಯಾಲಯದ ಇಂಗ್ಲಿಷ್ ವಿಭಾಗದಲ್ಲಿ ರೀಡರ್ ಆಗಿದ್ದಾರೆ.

31. **ಪದ್ಮಶ್ರೀ ಡಾ॥ ಎ. ಕೆ. ರಾಮಾನುಜನ್**
ಜನನ: 1929; ಕನ್ನಡ ಹಾಗೂ ಇಂಗ್ಲಿಷ್ ಭಾಷೆಗಳಲ್ಲಿ ಇವರ ಕೃತಿಗಳು ಹೊರಬಂದಿವೆ.

ಕನ್ನಡ ಹಾಗೂ ತಮಿಳಿನಿಂದ ಕಾವ್ಯ ಮತ್ತು ಕಾದಂಬರಿಗಳನ್ನು ಇಂಗ್ಲಿಷಿಗೆ ಅನುವಾದಿಸಿದ್ದಾರೆ. ಈಗ ಚಿಕಾಗೊ ವಿಶ್ವವಿದ್ಯಾಲಯದಲ್ಲಿ ದ್ರಾವಿಡ ಅಧ್ಯಯನದ ಪ್ರಾಧ್ಯಾಪಕರಾಗಿದ್ದಾರೆ.

32. **ಸಿದ್ದಣ್ಣ ಮಸಳಿ**
ಜನನ: 1930: ಇವರ ಎರಡು ಕವನ ಸಂಗ್ರಹಗಳು ಪ್ರಕಟವಾಗಿವೆ. ಸವದತ್ತಿಯ ಜ್ಯೂನಿಯರ ಕಾಲೇಜಿನ ಪ್ರಿನ್ಸಿಪಾಲರಾಗಿ ಕೆಲಸ ಮಾಡುತ್ತಿದ್ದಾರೆ.

33. **ಜಿ. ಎಸ್. ಸಿದ್ಧಲಿಂಗಯ್ಯ**
ಜನನ: 1931; ಮೂರು ಕವನ ಸಂಗ್ರಹಗಳನ್ನೂ, ವಿಮರ್ಶಾತ್ಮಕ ಲೇಖನಗಳನ್ನೂ ಪ್ರಕಟಿಸಿದ್ದಾರೆ. ಚಿತ್ರದುರ್ಗದ ಸರ್ಕಾರಿ ಕಾಲೇಜಿನ ಪ್ರಿನ್ಸಿಪಾಲರಾಗಿ ಕೆಲಸ ಮಾಡುತ್ತಿದ್ದಾರೆ.

34. **ದೇವೇಂದ್ರಕುಮಾರ ಹಕಾರಿ ('ರವಿ')**
ಜನನ: 1931; ಈಗಾಗಲೆ ಪ್ರಕಟಗೊಂಡಿರುವ ಇವರ ಕೃತಿಗಳಲ್ಲಿ ಕವನ ಸಂಗ್ರಹಗಳು, ಕಾದಂಬರಿಗಳು ಮತ್ತು ನಾಟಕಗಳೂ ಸೇರಿವೆ. ಕರ್ನಾಟಕ ವಿಶ್ವವಿದ್ಯಾಲಯದ ಕನ್ನಡ ಅಧ್ಯಯನಪೀಠದಲ್ಲಿ ಅಧ್ಯಾಪಕರಾಗಿದ್ದಾರೆ.

35. **ಡಾ॥ ಬುದ್ದಣ್ಣ ಹಿಂಗಮಿರೆ**
ಜನನ: 1933: ಕವನ ಸಂಗ್ರಹಗಳನ್ನೂ, ರಷ್ಯನ್ ಹೊಸ ಕವಿತೆಗಳ ಅನುವಾದಗಳನ್ನೂ ಮತ್ತು ವಿಮರ್ಶಾತ್ಮಕ ಲೇಖನಗಳ ಸಂಗ್ರಹವೊಂದನ್ನೂ ಹೊರತಂದಿದ್ದಾರೆ. ಆ್ಯಂಥಾಲಜಿಯೊಂದನ್ನು ಸಂಪಾದಿಸಿ ಪ್ರಕಟಿಸಿದ್ದಾರೆ. ಧಾರವಾಡ ಕರ್ನಾಟಕ ಕಾಲೇಜಿನಲ್ಲಿ ಕನ್ನಡ ಅಧ್ಯಾಪಕರಾಗಿದ್ದಾರೆ.

36. **ಪಿ. ಲಂಕೇಶ**
ಜನನ: 1935: ಕವಿ, ನಾಟಕಕಾರ, ಕಾದಂಬರಿಕಾರ, ವಿಮರ್ಶಕ ಹಾಗೂ ಸಣ್ಣಕಥೆಗಳ ಲೇಖಕ. 'ಅಕ್ಷರ ಹೊಸ ಕಾವ್ಯ'ದ ಸಂಪಾದಕ. 'ಪಲ್ಲವಿ' ಚಲನಚಿತ್ರದ ಕಥಾಲೇಖಕ, ನಿರ್ಮಾಪಕ ಹಾಗೂ ನಿರ್ದೇಶಕ. ಬೆಂಗಳೂರು ವಿಶ್ವವಿದ್ಯಾಲಯದ ಇಂಗ್ಲಿಷ್ ವಿಭಾಗದಲ್ಲಿ ಅಧ್ಯಾಪಕರಾಗಿದ್ದಾರೆ.

37. **ಸುಮತೀಂದ್ರ ನಾಡಿಗ**
ಜನನ: 1935: ಕವಿತೆ, ವಿಮರ್ಶೆ, ಸಣ್ಣಕಥೆಗಳ ಲೇಖಕ. ಕೆಲಕಾಲ ಇಂಗ್ಲಿಷ್ ಅಧ್ಯಾಪಕರಾಗಿ ಕೆಲಸ ಮಾಡಿ ಈಗ ಬೆಂಗಳೂರಿನ ಬಾಪ್ಕೊ ಪಬ್ಲಿಕೇಶನ್ಸ್ ಸಂಸ್ಥೆಯಲ್ಲಿ ಕೆಲಸ ಮಾಡುತ್ತಿದ್ದಾರೆ.

38. **ಎಚ್. ಎಂ. ಚೆನ್ನಯ್ಯ**
ಜನನ: 1935: ಕಾವ್ಯ, ನಾಟಕ, ವಿಮರ್ಶೆಯ ಕೃತಿಗಳನ್ನು ಪ್ರಕಟಿಸಿದ್ದಾರೆ. ಮೈಸೂರು ವಿಶ್ವವಿದ್ಯಾಲಯದ ಕನ್ನಡ ಅಧ್ಯಯನ ಸಂಸ್ಥೆಯಲ್ಲಿ ರೀಡರ್ ಆಗಿದ್ದಾರೆ.

39. **ಕೆ. ಎಸ್. ನಿಸಾರ್ ಅಹಮದ್**
ಜನನ: 1936: ಇವರ ಐದು ಕವನ ಸಂಗ್ರಹಗಳು ಪ್ರಕಟವಾಗಿದ್ದು, ಶೇಕ್ಸ್‌ಪಿಯರನ ನಾಟಕವೊಂದನ್ನು ಕನ್ನಡಕ್ಕೆ ಅನುವಾದಿಸಿದ್ದಾರೆ. ಶಿವಮೊಗ್ಗೆಯ ಸರಕಾರಿ ಕಾಲೇಜೊಂದರಲ್ಲಿ ಅಧ್ಯಾಪಕರಾಗಿದ್ದಾರೆ.

40. **ಚಂದ್ರಶೇಖರ ಕಂಬಾರ**
ಜನನ: 1938; ಕವಿ ಹಾಗೂ ನಾಟಕಕಾರ. 'ಜೋಕುಮಾರಸ್ವಾಮಿ' ನಾಟಕಕ್ಕೆ ಭಾರತೀಯ ನಾಟ್ಯರಂಗ ಪ್ರಶಸ್ತಿ; ಬೆಂಗಳೂರು ವಿಶ್ವವಿದ್ಯಾಲಯದ ಕನ್ನಡ ಅಧ್ಯಯನ ಕೇಂದ್ರದಲ್ಲಿ ಅಧ್ಯಾಪಕರಾಗಿದ್ದಾರೆ.

41. **ಚಂದ್ರಶೇಖರ ಪಾಟೀಲ**
ಜನನ: 1939; ಕವಿ ಮತ್ತು ನಾಟಕಕಾರ: 'ಸಂಕ್ರಮಣ' ದ್ವೈಮಾಸಿಕದ ಸಂಪಾದಕ; ಇಂಗ್ಲಿಷಿನಲ್ಲಿಯೂ ಕವಿತೆಗಳನ್ನು ಬರೆಯುತ್ತಾರೆ. ಕರ್ನಾಟಕ ವಿಶ್ವವಿದ್ಯಾಲಯದ ಇಂಗ್ಲಿಷ್ ವಿಭಾಗದಲ್ಲಿ ಅಧ್ಯಾಪಕರಾಗಿದ್ದಾರೆ.

42. **ಗಿರಡ್ಡಿ ಗೋವಿಂದರಾಜ**
ಜನನ: 1939; ಕವಿ, ಕಥೆಗಾರ ಹಾಗೂ ವಿಮರ್ಶಕ; ಗುಲ್ಬರ್ಗಾ ಸ್ನಾತಕೋತ್ತರ ಕೇಂದ್ರದ ಇಂಗ್ಲಿಷ್ ವಿಭಾಗದಲ್ಲಿ ಅಧ್ಯಾಪಕರಾಗಿದ್ದಾರೆ.

43. **ಸಿದ್ಧಲಿಂಗ ಪಟ್ಟಣಶೆಟ್ಟಿ**
ಜನನ: 1939; ಎರಡು ಕವನ ಸಂಗ್ರಹಗಳನ್ನೂ ಸಣ್ಣಕಥೆಗಳನ್ನೂ ಪ್ರಕಟಿಸಿದ್ದಾರೆ. ಹಿಂದಿಯಲ್ಲಿಯೂ ಕವಿತೆ, ವಿಮರ್ಶೆಗಳನ್ನು ಬರೆದಿದ್ದಾರೆ. ಧಾರವಾಡ ಕರ್ನಾಟಕ ಕಾಲೇಜಿನಲ್ಲಿ ಹಿಂದೀ ಅಧ್ಯಾಪಕರಾಗಿದ್ದಾರೆ.

44. **ಸೋಮಶೇಖರ ಇಮ್ರಾಪುರ**
ಜನನ: 1940; ಐದು ಕವನ ಸಂಗ್ರಹಗಳೂ, ಒಂದು ವಿಮರ್ಶಾ ಲೇಖನಗಳ ಸಂಗ್ರಹವೂ ಪ್ರಕಟವಾಗಿವೆ. ಕರ್ನಾಟಕ ವಿಶ್ವವಿದ್ಯಾಲಯದ ಕನ್ನಡ ಅಧ್ಯಯನ ಪೀಠದಲ್ಲಿ ಅಧ್ಯಾಪಕರಾಗಿದ್ದಾರೆ.

45. **ಕೆ. ರಾಘವೇಂದ್ರರಾವ್**
ಜನನ: 1928; ಇಂಗ್ಲಿಷಿನಲ್ಲಿ ಕವಿತೆಗಳನ್ನೂ, ಅನುವಾದಗಳನ್ನೂ, ರಾಜ್ಯಶಾಸ್ತ್ರದಲ್ಲಿ ಸಂಶೋಧನಾತ್ಮಕ ಲೇಖನಗಳನ್ನೂ ಪ್ರಕಟಿಸಿದ್ದಾರೆ. 'ದಿ ಮಾಡರ್ನ್ ಇಂಡೋ-ಆಂಗ್ಲಿಯನ್ ಪೊಯೆಟ್ರಿ' ಸಂಕಲನಕ್ಕೆ ಪಿ. ಲಾಲರ ಜೊತೆ ಸಂಪಾದಕರಾಗಿದ್ದಾರೆ. ಕರ್ನಾಟಕ ವಿಶ್ವವಿದ್ಯಾಲಯದ ರಾಜ್ಯಶಾಸ್ತ್ರ ವಿಭಾಗದಲ್ಲಿ ರೀಡರ್ ಆಗಿದ್ದಾರೆ.

## INTRODUCING THE POETS

1. **M. GOVINDA PAI** (1883–1963):
Chief works: *Gilivindu* (poems), *Golgotha* (Narrative poem), *Vaishakhi* (mini-epic), and *Hebberalu* (Play); also distinguished scholar with a large number of research papers to his credit; the former Madras Government officially honoured him as *Rashtra Kavi* (national poet).

2. **MASTI VENKATESH IYENGAR** (Srinivasa): born 1891;
a versatile writer with significant contribution in the fields of short story, poetry, drama, criticism and autobiography; for two decades editor of the literary monthly *Jeevana* (Bangalore); won the National Sahitya Akademi Award for the collection of short stories *Sanna Kathegalu* 12–13; president of the Indian PEN.

3. **D. R. BENDRE** (Ambikatanaya Datta): born 1896;
many-sided achievement in poetry, drama and criticism, but essentially a poet; his collections of poems, *Aralu-Maralu* and *Naku Tanti* won the National Sahitya Akademi and the Bharateeya Gnana Peetha awards respectively.

4. **V. SITARAMAIAH** (Veesee): born 1899;
published poetry, essays, drama, literary and art criticism; an expert economist with formal training; won the National Sahitya Akademi award for his collection of poems, *Aralu-Baralu*; also published scholarly work in English.

5. **BETAGERI KRISHNA SHARMA** (Anandakanda): born 1900;
published poetry, short stories, novels, radio plays, folk literature; for a long period edited the monthly, *Jayanti*.

6. **CHANNAMALLAPPA GALAGALI** (Madhura chenna, 1903-1953)
writings include poetry, autobiography, research work spiritual-metaphysical speculation; and translations.

7. **K. V. PUTTAPPA** (Kuvempu): born 1904;
a former Professor of Kannada and Vice-Chancellor, Mysore University; many-sided output covering poetry, short stories, novels, drama, essays, criticism and biography; his major work, *Sri Ramayana Darshanam* won the National Sahitya Akademi award; also won the Bharateeya Gnana Peetha award for the same work.

8. **KADANGODLU SHANKARA BHAT** (1904–1968):
author of poetry, short stories, novels, and criticism; edited for several years the journals, *Rashtrabandhu* and *Rashtramata.*

9. **P. T. NARASIMHACHAR** (Pu. Ti. Na): born 1905;
published poetry, essays, and criticism, won National Sahitya Akademi award for his work *Hamsadamayanti and other operas.*

10. **R. S. MUGALI** (Rasikaranga): born 1906;
author of poetry, short stories, novels, plays and criticism; won the National Sahitya Akademi award for his scholarly work, *Kannada Sahitya Charitre.*

11. **D. S. KARKI** born 1907:
author of poetry, children's verse, essays and research work; retired as the Principal of a College in Hubli.

12. **V. K. GOKAK** (Vinayaka): born 1909;
a former Vice-Chancellor of Bangalore University, Director of the Indian Institute of Advanced Studies, Simla; output includes poetry (Kannada and English), novels (Kannada and English), criticism (Kannada and English), play, travelogue; his *Dyava Prithvi* won the National Sahitya Akademi award.

13. **DINAKARA DESAI**: born 1909;
author of poetry, epigrams, and travelogue; president, Canara Welfare Trust.

14. **ISHWARA SANAKAL**: born 1906;
author of two collections of poetry, *Korike* and *Batte.*

15. **SHRIMATI JAYADEVITAI LIGADE**: born 1912;
author of two collections of poems and a religious epic, *Siddarameshwara Purana*; has translated Vachanas into Marathi; also writes in Marathi.

16. **S. D. INCHALA** (1913–1974):
published collections of poems and children's verse; won a national teachers award.

17. **K. S. NARASIMHA SWAMY**: born 1915;
published several collections of poems and one collection of essays; most well-known as the lyrical writer of the love poems, *Mysore Mallige.*

18. **M. GOPALAKRISHNA ADIGA**: born 1918;
published poetry, critical essays, novels, political and educational writings, and translations; editor of the literary journal, *Sakhsi*; worked as a Professor of English and Principal of Colleges.

19. **SIDDIAH PURANIK** (Kavyananda): born 1918;
published poetry, plays, biographical works and novels; also a distinguished member of the Indian Administrative Service.

20. **R. C. HIREMATH**: born 1920;
essentially a teacher and scholar, has published poetry, criticism, works on linguistics; edited classics; currently Vice-Chancellor, Karnatak University, Dharwar.

21. **S. R. EKKUNDI**: born 1923;
author of poetry; translator from Russian poetry; has been High School teacher for a number of years.

22. **V. G. BHAT**: born 1923;
author of poetry, short stories and pen-pictures: working as Director, Khadi and Village Industries Commission, Bombay.

23. **GANGADHARA CHITTAL**: born 1923;
author of three collections of poems, the latest being *Hariva Neeridu*; works for the Indian railways.

24. **B. C. RAMACHANDRA SHARMA**: born 1925;
published poetry, short stories, and plays; currently heads the psychological service in Lusaka, Zambia.

25. **M. AKABAR ALI**: born 1925;
author of four collections of poetry and a novel; currently works at the correspondence course Institute of Mysore University.

26. **G. S. SHIVARUDRAPPA**: born 1926;
published poetry, research work, criticism; Chief Editor of *Samagra Kannada Sahitya Charitre* and *Sahitya Vaarshika*; now heads the Centre of Kannada Studies, Bangalore University.

27. **T. R. RAJASEKHARAIAH**: born 1926;
published poems and short stories, and a study of the American poet, Walt Whitman (in English); currently Professor of English, Post-Graduate Centre, Gulbarga.

28. **SHANTAYYA** (Shantarasa): born 1926;
published poetry, plays, essays, translations; edited classics; teaches at Hamdard High School, Raichur.

29. **CHENNAVEERA KANAVI**: born 1928;
published poetry and criticism; edited several collections; currently Director, Extension Service and Publications, Karnatak University, Dharwar.

30. **SHANKAR MOKASHI PUNEKAR**: born 1928;
author of poetry, criticism (in Kannada and English) and novel; currently Reader in English, Karnatak University.

31. **A. K. RAMANUJAN**: born 1929;
published poetry in Kannada and English, and translations;

currently Professor of Dravidian Studies, Chicago University, Chicago, USA.

32. **SIDDANNA MASALI**: born 1930;
published two collections of poems; now Principal, Junior College, Saundatti.

33. **G. S. SIDDALINGIAH**: born 1931;
author of three collections of poems and criticism; now Principal, Government College, Chitradurga.

34. **DEVENDRAKUMAR HAKARI** (Ravi): born 1931;
author of poetry, novels and plays; now teaches Kannada at the Institute of Kannada Studies, Karnatak University.

35. **BUDDANNA HINGAMIRE**: born 1933;
published poetry, translation from Russian, and criticism; editor of an anthology of recent poetry; currently teaching Kannada at Karnatak College, Dharwar.

36. **P. LANKESH**: born 1935;
poet, playwright, novelist, critic, short-story writer, and editor of the anthology, *Akshara Hosakavya*; now well known as producer-director-actor of the Kannada movie, *Pallavi*; teaches English at Bangalore University.

37. **SUMATEENDRA NADIGA**: born 1935;
author of poetry, short stories and criticism; formerly a teacher of English and now working in BAPCO publication, Bangalore.

38. **H. M. CHANNIAH**: born 1935;
published poetry, play and criticism; now a Reader in Kannada, Mysore University.

39. **K. S. NISSAR AHMED**: born 1936;
author of five collections of poems; translator of Shakespear; now a Reader in Geology, Government College, Shimoga.

40. **CHANDRASEKHARA KAMBAR**: born 1938;
poet and playwright; his play *Jokumara Swami* won a national drama award; teaches Kannada at Bangalore University.

41. **CHANDRASEKHARA PATIL**: born 1939;
poet and playwright; editor of the journal, *Sankramana*; writes poetry in English also; now teaches English at Karnatak University.

42. **GIRADDI GOVINDARAJA**: born 1939;
published poetry, short stories and criticism; teaches English at the Post-Graduate Centre, Gulbarga.

43. **SIDDALINGA PATTANASHETTY**: born 1939;
published poetry and criticism in Kannada and Hindi; teaches Hindi at Karnatak College, Dharwar.

44. **SOMASEKHARA IMRAPUR**: born 1940;
published poetry and criticism; teaches Kannada at Karnatak University.

45. **K. RAGHAVENDRA RAO**: born 1928;
published poetry in English, translations, and research work in Political Science; edited with P. Lal, "The Modern Indo-Anglian Poetry"; currently Reader in Political Science, Karnatak University.

## BIBLIOGRAPHY


1. **E. P. Rice:** *A History of Kanarese Literature;* (English) 1915.

2. **R. S. Mugali:** *Kannada Sahitya Charitre:* Usha Sahitya-male, Mysore, 1960, Rs. 8/-.

3. **S. Anantanarayana:** *Hosagannada Kaviteya mele English Kavyada Prabhava,* Ganga Taranga Publishers, Mysore, 1962, Rs. 15/-.

4. **Nadedu Banda Dari:** Edited by G. B. Joshi and K. D. Kurtakoti, Vol. 1, 1959, Manohar Grantha Prakashana Samiti, Dharwar.

5. **K. D. Kurtakoti:** *Bendre Hagu Kannada Kavyada Swarupa* Kannada Sahitya Sangha, Kalburgi, 1961.

6. **Manvantara** (An irregular Kannada miscellaney devoted to literary criticism): Edited by G. B. Joshi, No. 2, 1963, Manvantara Publications, Dharwar. The whole issue is devoted to comments by K. D. Kurtakoti on modern Kannada poetry, and on different Kannada Poets.

7. **G. S. Sivarudrappa:** *Gathibimba,* Suruchi Prakashana, Mysore, 1969, Rs. 4/-. *Kannada Sahitya Sameekshe,* Bangalore University, Bangalore, 1975, Rs. 4/-.

8. **Chennaveera Kanavi:** *Sahitya Chintana,* Ananda Publications, Dharwar 1969, Rs. 3-50. *Kavyanusandhana* T. V. Memorial Series, Mysore, 1971, Rs. 5/-.

9. **Sankramana:** (Kannada Bi-monthly), Dharwar, No. 5, April 1965, S. R. Mokashi's survey of Kannada poetry published during 1964; No. 7, August 1965, Shantinath Desai's brief but helpful comment, 'Kannada Navyakaviteyalliya Manodharma' give a sympathetic account of the Navyakavya.

10. **L. S. Sheshagiri Rao:** *Hosagannada Sahitya,* Bangalore University, Bangalore, 1975, Rs. 4/-.